Table of Contents

# ಅರ್ಥಶಾಸ್ತ್ರ

**ಕರ್ನಾಟಕ ಸರ್ಕಾರ**

ಮೂಲ ಆರ್ಥಿಕ ವಿಶ್ಲೇಷಣೆ

ಒಂಬತ್ತನೆಯ ತರಗತಿ

ವಿಶೇಷ ಚೇತನ ವಿದ್ಯಾರ್ಥಿಗಳಿಗಾಗಿ

ಕನ್ನಡ ಮಾಧ್ಯಮ 2016

ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.)

100 ಅಡಿ ವರ್ತುಲ ರಸ್ತೆ, ಬನಶಂಕರಿ 3 ನೇ ಹಂತ

ಬೆಂಗಳೂರು- 560 085

**ಮಿತ್ರ ಜ್ಯೋತಿ ಡಿಜಿಟಲ್ ಲೈಬ್ರರಿ**

**ಮಿತ್ರ ಜ್ಯೋತಿ**

ಸಿ. ಎ. ಸೈಟ್ ನಂ. ಪಿ- 22, 18 ನೇ ಅಡ್ಡರಸ್ತೆ, 31 ನೇ ಮುಖ್ಯರಸ್ತೆ,

ಸೆಕ್ಟರ್- 1, ನಿಫ್ಟ್‌ನ ಹಿಂಭಾಗ, ಹೆಚ್.ಎಸ್.ಆರ್. ಲೇಔಟ್,

ಬೆಂಗಳೂರು- 560102

+91 ಕಂಟ್ರಿ ಕೋಡ್: 80 ಸಿಟಿ ಕೋಡ್

ದೂರವಾಣಿ ಸಂಖ್ಯೆ: 22587623/ 22587625
ಈ-ಮೇಲ್: mj.tblibrary@gmail.com
ವೆಬ್ ಸೈಟ್: www.mitrajyothi.org

**ಪ್ರತಿಕರಣ ಹಕ್ಕು ತಿದ್ದುಪಡಿ ಪ್ರಕಟಣೆ:**

ಸುಲಭವಾಗಿ ಲಭ್ಯವಾಗುವ ಈ ಪುಸ್ತಕ/ ಡೈಸಿ ಧ್ವನಿಮುದ್ರಣವನ್ನು, ಸಾಮಾನ್ಯ ಮುದ್ರಣ ಪ್ರತಿಯನ್ನು ಓದಲಾಗದ ದೃಷ್ಟಿವಿಶೇಷಚೇತನರಿಗಾಗಿ ಹಾಗೂ ಮುದ್ರಣ ಪ್ರತಿಯನ್ನು ಓದಲು ಅಸಮರ್ಥರಾದವರಿಗಾಗಿ ಮಿತ್ರಜ್ಯೋತಿ ಸಂಸ್ಥೆಯಿಂದ ವಿಶೇಷವಾಗಿ ತಯಾರಿಸಲಾಗಿದೆ. ಮಿತ್ರಜ್ಯೋತಿಯ ವಿಳಾಸ: ಸಿ.ಎ. ಸೈಟ್ ನಂ. ಪಿ 22, 18 ನೇ ಅಡ್ಡರಸ್ತೆ, 31 ನೇ ಮುಖ್ಯರಸ್ತೆ, ಸೆಕ್ಟರ್ 1, ನಿಫ್ಟ್‌ನ ಹಿಂಭಾಗ, ಹೆಚ್.ಎಸ್.ಆರ್. ಲೇಔಟ್, ಬೆಂಗಳೂರು – 560 102. ದೂರವಾಣಿ ಸಂಖ್ಯೆ – 22587623/ 22587625 (ಭಾರತದ ಕೋಡ್: +91, ಬೆಂಗಳೂರಿನ ಕೋಡ್: 080). ಈ-ಮೇಲ್ ವಿಳಾಸ: mj.tblibrary@gmail.com; ವೆಬ್ಸೈಟ್: www.mitrajyothi.org

## ಮುನ್ನುಡಿ

ಪ್ರೌಢಶಾಲೆಯಲ್ಲಿ ಅಭ್ಯಾಸ ಮಾಡುತ್ತಿರುವ ವಿಶೇಷ ಚೇತನ ವಿದ್ಯಾರ್ಥಿಗಳಿಗಾಗಿ ಈ ಪಠ್ಯಪುಸ್ತಕವನ್ನು ಸಿದ್ಧಪಡಿಸಲಾಗಿದೆ. ವಿಜ್ಞಾನ ಮತ್ತು ಗಣಿತ ವಿಷಯಗಳಿಗೆ ಪರ್ಯಾಯವಾಗಿ ವಿದ್ಯಾರ್ಥಿಗಳು ಇಚ್ಚಿಸಿದಲ್ಲಿ ರಾಜ್ಯಶಾಸ್ತ್ರ, ಸಮಾಜಶಾಸ್ತ್ರ ಮತ್ತು ಅರ್ಥಶಾಸ್ತ್ರ ಈ ಮೂರು ವಿಷಯಗಳಲ್ಲಿ ಎರಡು ವಿಷಯಗಳನ್ನು ಆಯ್ಕೆಮಾಡಿಕೊಳ್ಳುವ ಅವಕಾಶವನ್ನು ನೀಡಲಾಗಿದೆ. ಇವುಗಳಲ್ಲಿ ಅರ್ಥಶಾಸ್ತ್ರ ಪಠ್ಯವಿಷಯವೂ ಒಂದಾಗಿದೆ. 2015 ನೇ ಸಾಲಿನಲ್ಲಿ ಸಿದ್ಧಪಡಿಸಿದ ಹತ್ತನೇ ತರಗತಿ ಪಠ್ಯಪುಸ್ತಕವು 'ಭಾರತೀಯ ಆರ್ಥಿಕತೆಯ ಮೂಲ ಅಂಶಗಳು' ಎಂಬ ಶೀರ್ಷಿಕೆ ಅಡಿಯಲ್ಲಿ ಆರ್ಥಿಕತೆಯ ವಿವಿಧ ಮಜಲುಗಳನ್ನು ವಿದ್ಯಾರ್ಥಿಗಳು ಅರ್ಥೈಸಿಕೊಳ್ಳಲು ನೆರವಾಗಿದೆ ಹಾಗೂ ಎಂಟನೇ ತರಗತಿಯಲ್ಲಿ 'ಅರ್ಥಶಾಸ್ತ್ರದ ಮೂಲ ಪರಿಕಲ್ಪನೆಗಳು' ಎಂಬ ಶೀರ್ಷಿಕೆಯಡಿಯಲ್ಲಿ ಪರಿಚಯಿಸಲಾಗಿದೆ. ಈಗ 2016 ನೇ ಸಾಲಿನ ಒಂಬತ್ತನೇ ತರಗತಿಯ ಪಠ್ಯಪುಸ್ತಕವು 'ಮೂಲ ಆರ್ಥಿಕತೆಯ ವಿಶ್ಲೇಷಣೆ' ಎಂಬ ಶೀರ್ಷಿಕೆಯಡಿಯಲ್ಲಿ ಪ್ರಕಟವಾಗುತ್ತಿದೆ. ಇದು 2005 ರ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟಿನಡಿಯಲ್ಲಿ ಹಾಗೂ ಪಠ್ಯವಸ್ತುವಿಗೆ ಅನುಗುಣವಾಗಿ ರಚನೆಯಾಗಿದೆ. ಈ ಪಠ್ಯದಲ್ಲಿರುವ ಅಧ್ಯಾಯಗಳು ವಿದ್ಯಾರ್ಥಿಗಳಲ್ಲಿ ಮೂಲ ಆರ್ಥಿಕತೆಯ ವಿಶ್ಲೇಷಣೆಯ ಪರಿಕಲ್ಪನೆಗಳನ್ನು ಅರ್ಥಮಾಡಿಕೊಳ್ಳಲು ನೆರವಾಗಲಿವೆ.

ಹತ್ತು ಅಧ್ಯಾಯಗಳನ್ನೊಳಗೊಂಡ ಈ ಪಠ್ಯಪುಸ್ತಕದಲ್ಲಿ ವಿಷಯ ಮಂಡನೆಯನ್ನು ಸಂಕ್ಷಿಪ್ತವಾಗಿ, ಸರಳವಾಗಿ ನಿರೂಪಿಸಲಾಗಿದೆ. ಹಂತ ಹಂತವಾಗಿ ವಿದ್ಯಾರ್ಥಿಗಳ ಸ್ವಯಂ ಕಲಿಕೆಗೆ ಉತ್ತೇಜನ ನೀಡುವಂತೆ ಮತ್ತು ಅವರಲ್ಲಿ ಸ್ವಯಂಚಿಂತನೆ ಬೆಳಸಲು ಪ್ರೇರಕವಾಗುವಂತೆ ಪಠ್ಯಪುಸ್ತಕವನ್ನು ರಚಿಸಲಾಗಿದೆ. ಪ್ರತಿ ಅಧ್ಯಾಯದ ಕೊನೆಯಲ್ಲಿ ನೀಡಿರುವ ಅಭ್ಯಾಸಗಳು ವಿದ್ಯಾರ್ಥಿಗಳಲ್ಲಿ ಚರ್ಚೆ ಮತ್ತು ವಿಚಾರ ವಿನಿಮಯದಂತಹ ಚಟುವಟಿಕೆಗಳಲ್ಲಿ ಭಾಗವಹಿಸುವ ಅವಕಾಶವನ್ನು ಒದಗಿಸುತ್ತವೆ.

ಈ ಪಠ್ಯಪುಸ್ತಕವನ್ನು ಸಿದ್ಧಪಡಿಸುವಲ್ಲಿ ಸಹಕರಿಸಿದ ಪಠ್ಯಪುಸ್ತಕ ರಚನಾ ಸಮಿತಿಯ ಅಧ್ಯಕ್ಷರಿಗೆ, ಸದಸ್ಯರಿಗೆ, ಪರಿಶೀಲಕರಿಗೆ, ಪಠ್ಯಪುಸ್ತಕಗಳನ್ನು ಸುಂದರವಾಗಿ ಮುದ್ರಿಸಿದ ಮುದ್ರಕರಿಗೆ ಹಾಗೂ ಈ ಕಾರ್ಯದಲ್ಲಿ ಸಹಕರಿಸಿದ ಸಮಸ್ತರಿಗೂ ಕರ್ನಾಟಕ ಪಠ್ಯಪುಸ್ತಕ ಸಂಘದ ಪರವಾಗಿ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ. ವಿದ್ಯಾರ್ಥಿಗಳು ಪಠ್ಯಪುಸ್ತಕದ ಮೂಲಕ ಪ್ರೇರಣೆ ಪಡೆದು, ಸಾಮಾಜಿಕ ಪರಿಸರದ ಗುಣಾತ್ಮಕ ಮೌಲ್ಯಗಳನ್ನು ರೂಢಿಸಿಕೊಂಡು ಉತ್ತಮ ಪ್ರಜೆಗಳಾಗಿ ರೂಪುಗೊಳ್ಳಲೆಂದು ಕರ್ನಾಟಕ ಪಠ್ಯಪುಸ್ತಕ ಸಂಘವು ಆಶಿಸುತ್ತದೆ.

ನಾಗೇಂದ್ರ ಕುಮಾರ್, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.) ಬೆಂಗಳೂರು.

## ಅಧ್ಯಕ್ಷರ ನುಡಿ

"ನೈತಿಕತೆ ಮತ್ತು ಅರ್ಥಶಾಸ್ತ್ರದ ನಡುವೆ ಎಲ್ಲಿ ಹೋರಾಟ ಉಂಟಾಗುವುದೋ, ಅಲ್ಲಿ ಸದಾ ಅರ್ಥಶಾಸ್ತ್ರವು ವಿಜಯಿಸುತ್ತದೆ ಎಂದು ಇತಿಹಾಸವು ತಿಳಿಸುತ್ತದೆ. ಪಟ್ಟಭದ್ರ ಹಿತಾಸಕ್ತಿಗಳನ್ನು ಬಲವಂತದಿಂದ ನಿರ್ಬಂಧಿಸದ ಹೊರತು ಅವರನ್ನು ಅವರು ಸ್ವ ಇಚ್ಛೆಯಿಂದ ಸರಿಪಡಿಸಿಕೊಳ್ಳುವುದಿಲ್ಲ". ಡಾ. ಬಿ.ಆರ್. ಅಂಬೇಡ್ಕರ್

ಅರ್ಥಶಾಸ್ತ್ರವು ಆಸಕ್ತಿದಾಯಕ ವಿಷಯವಾಗಿದೆ. ಇದು ಸದಾ ಬದಲಾಗುತ್ತಿದ್ದು, ಇತಿಹಾಸದಿಂದ ಕಲಿತು, ಪ್ರಸ್ತುತದೊಂದಿಗೆ ವ್ಯವಹರಿಸುತ್ತದೆ ಮತ್ತು ಭವಿಷ್ಯಕ್ಕಾಗಿ ಸಿದ್ಧಗೊಳಿಸುವುದು. ಆದ್ದರಿಂದ ಅರ್ಥಶಾಸ್ತ್ರದ ಜ್ಞಾನವು ವ್ಯಕ್ತಿಗಳಿಗೆ ಮತ್ತು ಆರ್ಥಿಕತೆಗಳಿಗೆ ಅತ್ಯಗತ್ಯವಾಗಿದೆ.

ಅರ್ಥಶಾಸ್ತ್ರದ ಅಧ್ಯಯನವು ನಮಗೆ ಸಮಸ್ಯೆಯನ್ನು ಬಗೆಹರಿಸಿಕೊಳ್ಳುವ ಕೌಶಲ್ಯಗಳನ್ನು ಮತ್ತು ಸಮಸ್ಯೆಗಳನ್ನು ನೋಡುವ ಒಂದು ತಾರ್ಕಿಕ ದೃಷ್ಟಿಕೋನವನ್ನು ಬೆಳೆಸಿಕೊಳ್ಳಲು ಸಹಾಯಕವಾಗಿದೆ. ಹಾಗಾಗಿ, ಅರ್ಥಶಾಸ್ತ್ರದ ವಿದ್ಯಾರ್ಥಿಗಳು ಉತ್ತಮ ಜ್ಞಾನವುಳ್ಳ ನಿರ್ಧಾರಗಳನ್ನು ತೆಗೆದುಕೊಳ್ಳಲು ಶಕ್ತರಾಗಿರುತ್ತಾರೆ. ಅರ್ಥಶಾಸ್ತ್ರವು ಗಣಿತಶಾಸ್ತ್ರ, ಸಂಖ್ಯಾಶಾಸ್ತ್ರ, ಭೌತಶಾಸ್ತ್ರ, ರಾಜ್ಯಶಾಸ್ತ್ರ, ಸಮಾಜಶಾಸ್ತ್ರ, ಪರಿಸರ, ಕೃಷಿ ವಿಜ್ಞಾನ, ಕಾನೂನು, ಆಡಳಿತ, ಬ್ಯಾಂಕಿಂಗ್ ಹಣಕಾಸು, ವ್ಯಾಪಾರ, ನಿರ್ವಹಣೆ, ವಿಮೆ, ರಿಯಲ್ ಎಸ್ಟೇಟ್, ಸಾರ್ವಜನಿಕ ಆಡಳಿತ, ಪತ್ರಿಕೋದ್ಯಮ, ಆರೋಗ್ಯ ಸಂರಕ್ಷಣೆ ಇತ್ಯಾದಿ ಶಾಖೆಗಳ ಅಧ್ಯಯನವನ್ನು ಮಾಡಲು ಅವಕಾಶ ನೀಡುವುದು.

ಅರ್ಥಶಾಸ್ತ್ರವು ಅತ್ಯಂತ ಪ್ರತಿಷ್ಠಿತವಾದ ಅಧ್ಯಯನ ವಿಷಯವಾಗಿದೆ. ಅರ್ಥಶಾಸ್ತ್ರವನ್ನು ಆಯ್ಕೆ ಮಾಡಿಕೊಳ್ಳುವ ವಿದ್ಯಾರ್ಥಿಗಳಿಗೆ ಮತ್ತೊಂದು ಅನುಕೂಲವಿರುತ್ತದೆ. ಅದೆಂದರೆ ಅವರು ಕಠಿಣವಾದ ತಾರ್ಕಿಕ ಮನೋಭಾವವನ್ನು ಅಭಿವೃದ್ಧಿ ಪಡಿಸಿಕೊಳ್ಳುವರು, ಹಾಗಾಗಿ ಅವರ ಭವಿಷ್ಯವು ಉಜ್ವಲ ಮತ್ತು ಯಶಸ್ವಿಯಾಗುತ್ತದೆ. ಪ್ರಸ್ತುತ 9ನೇ ತರಗತಿಯ ಅರ್ಥಶಾಸ್ತ್ರದ ಪಠ್ಯದಲ್ಲಿ 'ಮೂಲಭೂತ ಆರ್ಥಿಕ ವಿಶ್ಲೇಷಣೆ' ಯನ್ನು ಪರಿಚಯಿಸುವ ಪ್ರಯತ್ನ ಮಾಡಲಾಗಿದೆ. ಈ ಹಂತದಲ್ಲಿನ ವಿದ್ಯಾರ್ಥಿಗಳ ಅಗತ್ಯತೆಯನ್ನು ಗಮನದಲ್ಲಿಟ್ಟುಕೊಂಡು ಈ ಪಠ್ಯ ಪುಸ್ತಕವನ್ನು ರಚಿಸಲಾಗಿದೆ. ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ಕಠಿಣ ವಿಷಯಗಳನ್ನು ಸರಳೀಕರಿಸಿ ಪ್ರಸ್ತುತಪಡಿಸಲಾಗಿದೆ.

ಪ್ರಸ್ತುತ ರಚಿತವಾದ 'ಮೂಲ ಆರ್ಥಿಕ ವಿಶ್ಲೇಷಣೆ' ಎಂಬ ಪಠ್ಯಪುಸ್ತಕವು ಹತ್ತು ಅಧ್ಯಾಯಗಳನ್ನು ಹೊಂದಿದ್ದು, ಇದು ಆರ್ಥಿಕ ಸಿದ್ಧಾಂತಗಳ ಅಧ್ಯಯನದ ವಿಧಾನಗಳು, ಮಾರುಕಟ್ಟೆ ಸಂರಚನೆ, ವಿತರಣೆ, ಹಣ, ಹಣದ ಮಾರುಕಟ್ಟೆ ಮತ್ತು ಬಂಡವಾಳ ಮಾರುಕಟ್ಟೆ ರಾಷ್ಟ್ರೀಯ ಆದಾಯ, ವ್ಯಾಪಾರ ಆವರ್ತಗಳು, ಹಣದುಬ್ಬರ ಮತ್ತು ಹಣದಿಳಿತ,

ಕೋಶೀಯ ಮತ್ತು ಹಣಕಾಸು ನೀತಿ, ಯೋಗಕ್ಷೇಮದ ಅರ್ಥಶಾಸ್ತ್ರಗಳನ್ನು ತಿಳಿಯಬಹುದಾಗಿದೆ.

ವಿಭಿನ್ನ ಸಾಮರ್ಥವುಳ್ಳ/ ಅಂಧ ವಿಧ್ಯಾರ್ಥಿಗಳು ಸೂಕ್ಷ್ಮ ಮತ್ತು ತೀಕ್ಷ್ಣಗ್ರಾಹಿಗಳಾಗಿರುವುದರಿಂದ ಅವರ ಉತ್ಕಟ ಕಲಿಯುವ ಹಂಬಲವನ್ನು ಪೋಷಿಸುವ ಸಲುವಾಗಿ ಆಸಕ್ತಿಯಿಂದ ಈ ಪಠ್ಯವನ್ನು ರಚಿಸಲಾಗಿದೆ. ಅಲ್ಲದೇ ಜನಮುಖಿ ಮತ್ತು ಸಮಾಜಮುಖಿ ಆಶಯಗಳನ್ನು ಇಟ್ಟುಕೊಂಡು ಈ ಹಂತದ ವಿದ್ಯಾರ್ಥಿಗಳಿಗೆ ಎಷ್ಟನ್ನು ತಿಳಿಸಬೇಕು ಎನ್ನುವ ಚರ್ಚೆ ನಡೆಸಿ ಈ ಪಠ್ಯವನ್ನು ಸಿದ್ಧಗೊಳಿಸಲಾಗಿದೆ.

ನಾನು ನನ್ನ ಸಮುದಾಯದ ಶಿಕ್ಷಕ ಮಿತ್ರರೆಲ್ಲ, ಈ ಪಠ್ಯ ಪುಸ್ತಕವನ್ನು ವಿದ್ಯಾರ್ಥಿಗಳಿಗೆ ಬೋಧಿಸುವಾಗ ತಪ್ಪದೇ ಈ ಕೆಳಕಂಡ ಅಂಶಗಳನ್ನು ಅನುಸರಿಸಬೇಕೆಂದು ಕೋರಿಕೊಳ್ಳುತ್ತೇನೆ.

1. ಪ್ರತಿ ಅಧ್ಯಾಯದ ಮೊದಲನೇ ಕಂಡಿಕೆಯಲ್ಲಿ ವಿದ್ಯಾರ್ಥಿಗಳು ಅಧ್ಯಾಯದ ನಂತರ ತಿಳಿದುಕೊಳ್ಳುವ ವಿಷಯಗಳನ್ನು ಪ್ರಶ್ನೆಗಳ ಮೂಲಕ ನೀಡಲಾಗಿದೆ. ಹಾಗಾಗಿ ಶಿಕ್ಷಕರು ಪ್ರತಿ ಅಧ್ಯಾಯದ ಪ್ರಾರಂಭದಲ್ಲಿ ಈ ಪ್ರಶ್ನೆಗಳನ್ನು ವಿದ್ಯಾರ್ಥಿಗಳಿಗೆ ಕೇಳಬೇಕು ಮತ್ತು ಈ ವಿಷಯಗಳ ಬಗ್ಗೆ ವಿದ್ಯಾರ್ಥಿಗಳಲ್ಲಿ ಆಸಕ್ತಿ ಮತ್ತು ಕುತೂಹಲ ಹುಟ್ಟಿಸಿ, ಈ ವಿಷಯಗಳನ್ನು ಕಲಿಯಲು ಉತಾಹಿತರನ್ನಾಗಿಸಬೇಕು.
2. ಈ ಪಠ್ಯ ಪುಸ್ತಕದ ಗುಣ ಮತ್ತು ದೋಷಗಳನ್ನು ಶಿಕ್ಷಕರು, ಪೋಷಕರು, ವಿದ್ಯಾರ್ಥಿಗಳು ಕರ್ನಾಟಕ ಪಠ್ಯ ಪುಸ್ತಕ ಸಮಿತಿಗೆ ತಿಳಿಸಬೇಕೆಂದು ಕೋರಿಕೊಳ್ಳುತ್ತಿದ್ದೇವೆ. ಶಿಕ್ಷಕರ ಮೌಲ್ಯಯುತ ಸಲಹೆಗಳನ್ನು ಪಠ್ಯಪುಸ್ತಕ ಪರಿಷ್ಕರಣೆಯ ಹಂತದಲ್ಲಿ ಅಳವಡಿಸಿಕೊಳ್ಳಲಾಗುವುದು. ಈ ನಿಟ್ಟಿನಲ್ಲಿ ಪೋಷಕರು, ಮತ್ತು ವಿದ್ಯಾರ್ಥಿಗಳು ಸಲಹೆಯನ್ನು ಸ್ವಾಗತಿಸುತ್ತೇವೆ.

3. ಪ್ರತಿ ಅಧ್ಯಾಯದ ಅಭ್ಯಾಸದಲ್ಲಿ ಕೊಟ್ಟಂತಹ ನಿಯೋಜಿತ ಕಾರ್ಯವನ್ನು ಮಾಡಲು ವಿದ್ಯಾರ್ಥಿಗಳಿಗೆ ಶಿಕ್ಷಕರು ಸೂಕ್ತವಾದ ಮಾರ್ಗದರ್ಶನವನ್ನು ಒದಗಿಸಲಿ ಎಂದು ನಾವು ನಮ್ರತೆಯಿಂದ ಶಿಕ್ಷಕ ಬಂಧುಗಳನ್ನು ಕೋರುತ್ತೇವೆ.
4. ಸದರಿ 9 ನೇ ತರಗತಿಯ "ಮೂಲ ಆರ್ಥಿಕ ವಿಶ್ಲೇಷಣೆ" ಎಂಬ ಪಠ್ಯಪುಸ್ತಕವನ್ನು ರೂಪಿಸಲು ನೇರವಾಗಿ ಹಾಗೂ ಪರೋಕ್ಷವಾಗಿ ಸಹಕರಿಸಿದ ಎಲ್ಲರಿಗೂ ನನ್ನ ಹೃದಯಪೂರ್ವಕ ವಂದನೆಗಳು.

**ಡಾ. ಎಸ್. ಆರ್. ಕೇಶವ,**
ಅಧ್ಯಕ್ಷರು, ಅರ್ಥಶಾಸ್ತ್ರ ಪಠ್ಯಪುಸ್ತಕ ರಚನಾ ಸಮಿತಿ,

ಬೆಂಗಳೂರು.

## ಪಠ್ಯಪುಸ್ತಕ ರಚನಾ ಸಮಿತಿ

**ಸಲಹೆ ಮತ್ತು ಮಾರ್ಗದರ್ಶನ:**

ಡಾ. ಬರಗೂರು ರಾಮಚಂದ್ರಪ್ಪ: ಅಧ್ಯಕ್ಷರು, ಕರ್ನಾಟಕ ಪಠ್ಯ ಪುಸ್ತಕ ಪರಿಶೀಲಕರ ಸಂಘ, ಬೆಂಗಳೂರು.

ಶ್ರೀ ನಾಗೇಂದ್ರ ಕುಮಾರ್: ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.

**ಅಧ್ಯಕ್ಷರು:** ಡಾ. ಎಸ್. ಆರ್. ಕೇಶವ: ಪ್ರಾಧ್ಯಾಪಕರು, ಅರ್ಥಶಾಸ್ತ್ರ ವಿಭಾಗ, ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು.

**ಸದಸ್ಯರುಗಳು:** ಶ್ರೀ. ಬಿ. ಎಂ. ಜಗದೀಶ್: ಅರ್ಥಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವ ಕಾಲೇಜು, ನೆಲಮಂಗಲ, ಬೆಂಗಳೂರು ಗ್ರಾಮಾಂತರ ಜಿಲ್ಲೆ.

ಡಾ. ಮಂಜುನಾಥ ಎನ್: ಅರ್ಥಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಮಾಸ್ತಿ, ಮಾಲೂರು (ತಾ), ಕೋಲಾರ ಜಿಲ್ಲೆ

**ಅನುವಾದಕರು:** ಡಾ. ಎಸ್. ಆರ್. ಕೇಶವ: ಪ್ರಾಧ್ಯಾಪಕರು, ಅರ್ಥಶಾಸ್ತ್ರ ವಿಭಾಗ, ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು.

**ಪರಿಶೀಲಕರು:** ಪ್ರೊ. ಎಸ್. ಟಿ. ಬಾಗಲಕೋಟೆ: ಪ್ರಾಧ್ಯಾಪಕರು, ಅರ್ಥಶಾಸ್ತ್ರ ವಿಭಾಗ, ಕರ್ನಾಟಕ ವಿಶ್ವವಿದ್ಯಾನಿಲಯ ಧಾರವಾಡ.

ಶ್ರೀಮತಿ ಸಿ. ನಾಗಮಣಿ: ಉಪನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.

**ಕಾರ್ಯಕ್ರಮ ಸಂಯೋಜಕರು:** ಶ್ರೀಮತಿ ಎನ್.ಎಸ್. ಸೌಮ್ಯ: ಸಹಾಯಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.

## ಪರಿವಿಡಿ

## ಅಧ್ಯಾಯ-1: ಆರ್ಥಿಕ ಅಧ್ಯಯನದ ವಿಧಾನಗಳು

"ವಾಸ್ತವವಾಗಿ ಸೂಕ್ಷ್ಮ ಮತ್ತು ಸಮಗ್ರ ಅರ್ಥಶಾಸ್ತ್ರಗಳ ನಡುವೆ ಯಾವುದೇ ವೈರುಧ್ಯವಿಲ್ಲ. ಎರಡೂ ಅಷ್ಟೇ ಮಹತ್ವವುಳ್ಳ ವಿಷಯಗಳಾಗಿವೆ. ಒಂದನ್ನೇ ತಿಳಿದುಕೊಂಡು ಇನ್ನೊಂದನ್ನು ಅರಿತುಕೊಳ್ಳದಿದ್ದರೆ ನೀವು ಅರ್ಧಕ್ಕಿಂತ ಕಡಿಮೆ ಕಲಿತಂತೆ". **ಪ್ರೊ. ಪಾಲ್ ಸ್ಯಾಮ್ಯುಯೆಲ್ಸನ್**

### ಪೀಠಿಕೆ:

ಪ್ರತಿ ವಿಷಯವು ಸಮಸ್ಯೆಯನ್ನು ಅಧ್ಯಯನ ಮಾಡಲು ವಿಭಿನ್ನ ವಿಧಾನಗಳನ್ನು ಪ್ರಯತ್ನಿಸುತ್ತದೆ. ಹೆಚ್ಚು ವಾಸ್ತವಿಕ ಮತ್ತು ಪರಿಣಾಮಕಾರಿ ಫಲಿತಾಂಶಗಳನ್ನು ಪಡೆಯಲು ವಿಧಾನಗಳು ಸಹಾಯಕವಾಗುತ್ತವೆ. ಅರ್ಥಶಾಸ್ತ್ರ ವಿಷಯವೂ ತಾನು ಅಭ್ಯಸಿಸುವ ಸಮಸ್ಯೆಗಳನ್ನು ವಿಶ್ಲೇಷಿಸಲು ಹಲವಾರು ವಿಧಾನಗಳನ್ನು ಅಳವಡಿಸಿಕೊಂಡಿದೆ. ಇವುಗಳು ಅರ್ಥಶಾಸ್ತ್ರದ ವಿವಿಧ ಶಾಖೆಗಳೆಂದೂ ಕರೆಯಲ್ಪಟ್ಟಿವೆ. ಅರ್ಥಶಾಸ್ತ್ರದಲ್ಲಿ ಬಳಸುವ ಅತ್ಯಂತ ಸಾಮಾನ್ಯ ಶಾಖೆಗಳೆಂದರೆ ಸೂಕ್ಷ್ಮ ಅರ್ಥಶಾಸ್ತ್ರ ಮತ್ತು ಸಮಗ್ರ ಅರ್ಥಶಾಸ್ತ್ರಗಳಾಗಿವೆ. ಹಾಗಾದರೆ ಸೂಕ್ಷ್ಮ ಅರ್ಥಶಾಸ್ತ್ರ ಎಂದರೇನು? ಸೂಕ್ಷ್ಮ ಅರ್ಥಶಾಸ್ತ್ರದ ಮಹತ್ವವೇನು? ಅದರ ಮಿತಿಗಳೇನು? ಹಾಗೆಯೇ ಸಮಗ್ರ ಅರ್ಥಶಾಸ್ತ್ರ ಎಂದರೇನು? ಸಮಗ್ರ ಅರ್ಥಶಾಸ್ತ್ರದ ಮಹತ್ವವೇನು? ಅದರ ಮಿತಿಗಳೇನು? ಈ ಅಧ್ಯಾಯದಿಂದ ಈ ಎಲ್ಲಾ ಪ್ರಶ್ನೆಗಳಿಗೆ ಉತ್ತರಗಳು ಹಾಗೂ ಈ ಎರಡು ಶಾಖೆಗಳ ಅರ್ಥ, ಸ್ವರೂಪದ ಕುರಿತು ಅಧ್ಯಯನ ಮಾಡಲಿದ್ದೀರಿ.

### ಸೂಕ್ಷ್ಮ ಅರ್ಥಶಾಸ್ತ್ರ:

ಸೂಕ್ಷ್ಮ ಅರ್ಥಶಾಸ್ತ್ರ ಎಂಬ ಪದವು 'ಮೈಕ್ರೋ ಎಕನಾಮಿಕ್ಸ್' ಎಂಬ ಇಂಗ್ಲೀಷ್ ಪದದ ಕನ್ನಡ ಅನುವಾದವಾಗಿದೆ. ಗ್ರೀಕ್ ಪದವಾದ 'ಮೈಕ್ರೋಸ್' ಎಂಬ ಪದದ ಅರ್ಥ ದಶಲಕ್ಷದ ಒಂದು ಭಾಗವನ್ನು ಅಂದರೆ ಅತ್ಯಂತ ಸಣ್ಣ ಘಟಕವನ್ನು ಬಿಂಬಿಸುತ್ತದೆ. ಹಾಗಾಗಿ ಸೂಕ್ಷ್ಮ ಅರ್ಥಶಾಸ್ತ್ರವು ಅರ್ಥವ್ಯವಸ್ಥೆಯ ಅತ್ಯಂತ ಸಣ್ಣ ಘಟಕಗಳನ್ನು ಇಲ್ಲವೆ ದಶಲಕ್ಷದಲ್ಲಿ ಒಂದು ಭಾಗವನ್ನು ಅಧ್ಯಯನ ಮಾಡುತ್ತದೆ. ವ್ಯಕ್ತಿಗತ ಅನುಭೋಗಿಗಳು ಮತ್ತು ಉತ್ಪಾದಕರೇ ಈ ಅತ್ಯಂತ ಸಣ್ಣ ಘಟಕಗಳಾಗಿದ್ದಾರೆ. ಈ ಎರಡು ಘಟಕಗಳು ತಮ್ಮ ದೈನಂದಿನ ವ್ಯವಹಾರಗಳನ್ನು ಹೇಗೆ ಜರುಗಿಸುತ್ತದೆ ಎಂಬ ಸೂಕ್ಷ್ಮತೆಗಳ ಅಧ್ಯಯನವೇ ಸೂಕ್ಷ್ಮ ಅರ್ಥಶಾಸ್ತ್ರವಾಗಿದೆ. ಉದಾಹರಣೆಗೆ: ಒಂದು ಸಿದ್ಧ ಉಡುಪು ತಯಾರಿಕಾ ಘಟಕವು ಎಲ್ಲಿಂದ ಮತ್ತು ಎಷ್ಟು ಬೆಲೆಗೆ ಕಚ್ಚಾ ವಸ್ತುಗಳನ್ನು ಖರೀದಿಸುತ್ತದೆ, ಉತ್ಪಾದಿಸಲು ಎಷ್ಟು ಜನ ಕಾರ್ಮಿಕರನ್ನು ನಿಯೋಜನೆಗೊಳಿಸುತ್ತದೆ? ಮತ್ತು ಉತ್ಪಾದಿಸಿದ ಸರಕನ್ನು ಎಷ್ಟು ಬೆಲೆಗೆ ಯಾವ

ಮಾರುಕಟ್ಟೆಗಳಲ್ಲಿ ಮಾರಾಟ ಮಾಡಲು ನಿರ್ಧರಿಸುತ್ತದೆ? ಎಂಬಂಥ ವಿಷಯಗಳನ್ನು ಸೂಕ್ಷ್ಮ ಅರ್ಥಶಾಸ್ತ್ರ ಅಭ್ಯಸಿಸುತ್ತದೆ. ಅದೇ ರೀತಿ ಅನುಭೋಗಿಗಳಾಗಿ ನೀವು ಯಾವ ವಸ್ತುವನ್ನು, ಎಷ್ಟು ಪ್ರಮಾಣದಲ್ಲಿ, ಯಾರ ಹತ್ತಿರ, ಯಾವಾಗ ಖರೀದಿಸುವ ನಿರ್ಧಾರ ತೆಗೆದುಕೊಳ್ಳುತ್ತೀರಿ? ಎಂಬುದನ್ನು ಸಹ ಸೂಕ್ಷ್ಮ ಅರ್ಥಶಾಸ್ತ್ರ ಅಭ್ಯಸಿಸುತ್ತದೆ. ಹಾಗೆಯೇ ವ್ಯಕ್ತಿಗತವಾದ ಅನುಭೋಗ, ಉಳಿತಾಯ, ಹೂಡಿಕೆ, ಕೊಳ್ಳುವಿಕೆ, ಮಾರಾಟ ಮುಂತಾದವುಗಳೆಲ್ಲವೂ ಸೂಕ್ಷ್ಮ ಅರ್ಥಶಾಸ್ತ್ರದ ಅಧ್ಯಯನದ ವಿಷಯಗಳಾಗಿವೆ.

## ವ್ಯಾಖ್ಯೆ:

ಪ್ರೊ. ಕೆ. ಇ. ಬೌಲ್ಡಿಂಗ್ ಅವರು "ಸೂಕ್ಷ್ಮ ಅರ್ಥಶಾಸ್ತ್ರವು ನಿರ್ದಿಷ್ಟ ಉದ್ಯಮ, ನಿರ್ದಿಷ್ಟ ಕುಟುಂಬ, ವೈಯಕ್ತಿಕ ಬೆಲೆ, ಕೂಲಿ, ಆದಾಯ, ನಿರ್ದಿಷ್ಟ ಕೈಗಾರಿಕೆ ಮತ್ತು ನಿರ್ದಿಷ್ಟ ಸರಕುಗಳ ಅಧ್ಯಯನವಾಗಿದೆ" ಎಂದು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

ಪ್ರೊ. ಮ್ಯಾಕೋನೆಲ್ ಅವರು "ಸೂಕ್ಷ್ಮ ಅರ್ಥಶಾಸ್ತ್ರವು ನಿರ್ದಿಷ್ಟ ಆರ್ಥಿಕ ಘಟಕದ ಅಧ್ಯಯನ ಮತ್ತು ಆ ವೈಯಕ್ತಿಕ ಘಟಕಗಳ ಸ್ವಭಾವದ ಸವಿಸ್ತಾರವಾದ ವಿಶ್ಲೇಷಣೆಯಾಗಿದೆ" ಎಂದು ಹೇಳುತ್ತಾರೆ.

ಅಂದರೆ ಸೂಕ್ಷ್ಮ ಅರ್ಥಶಾಸ್ತ್ರವು ಸಮಗ್ರ ಅರ್ಥವ್ಯವಸ್ಥೆಯನ್ನು ಅಥವಾ ಯಾವುದೇ ಆರ್ಥಿಕ ಚಟುವಟಿಕೆಯ ಒಟ್ಟು ಸ್ವರೂಪವನ್ನು ಪರಿಗಣಿಸದೇ ವ್ಯಕ್ತಿಗತ ಆರ್ಥಿಕ ಘಟಕ ಅಥವಾ ಆರ್ಥಿಕತೆಯ ಅಂಶಗಳನ್ನು ಪರಿಗಣಿಸುತ್ತದೆ. ಉದಾಹರಣೆಗೆ: ಒಂದು ಸರಕಿಗಿರುವ ಬೇಡಿಕೆ, ಅದರ ಪೂರೈಕೆ, ಬೆಲೆ ಇತ್ಯಾದಿ.

## ಸೂಕ್ಷ್ಮ ಅರ್ಥಶಾಸ್ತ್ರದ ಮಹತ್ವ:

ಸೂಕ್ಷ್ಮ ಅರ್ಥಶಾಸ್ತ್ರದ ಮಹತ್ವವನ್ನು ಈ ಕೆಳಕಂಡಂತೆ ವಿವರಿಸಬಹುದು.

1. **ಆರ್ಥಿಕ ಘಟಕಗಳ ಕಾರ್ಯನಿರ್ವಹಣೆ:** ಸೂಕ್ಷ್ಮ ಅರ್ಥಶಾಸ್ತ್ರದ ಮೂಲಕ ಸೂಕ್ಷ್ಮ ಮಟ್ಟದಲ್ಲಿ ಆರ್ಥಿಕ ಘಟಕಗಳ ಕಾರ್ಯ ನಿರ್ವಹಣೆಯನ್ನು ಅಭ್ಯಸಿಸಬಹುದಾಗಿದೆ. ಉದಾಹರಣೆಗೆ, ಪ್ರತಿ ಸರಕಿನ ಅಥವಾ ಸೇವೆಯ ಬೆಲೆ ನಿರ್ಧಾರ, ಒಂದು ಘಟಕದಲ್ಲಿನ ಉತ್ಪಾದನೆ, ಕಾರ್ಮಿಕರ ಕೂಲಿ ನಿರ್ಧಾರ ಇತ್ಯಾದಿ. ಹೀಗೆ ಸೂಕ್ಷ್ಮ ಅರ್ಥಶಾಸ್ತ್ರವು ಅರ್ಥವ್ಯವಸ್ಥೆಯ ಅತ್ಯಂತ ಚಿಕ್ಕ ಅಂಶಗಳ ಕುರಿತು ಅಧ್ಯಯನ ಮಾಡುತ್ತದೆ. ಹೋಲಿಕೆಗಾಗಿ ಹೇಳುವುದಾದರೆ ಸೂಕ್ಷ್ಮ ಅರ್ಥಶಾಸ್ತ್ರ ವಿಧಾನವು ಅರಣ್ಯದಲ್ಲಿನ ಒಂದೊಂದು ಮರಗಳನ್ನು ಬಿಡಿ ಬಿಡಿಯಾಗಿ ಅಭ್ಯಸಿಸುತ್ತದೆಯೇ ಹೊರತು ಇಡಿಯಾಗಿ ಅರಣ್ಯವನ್ನಲ್ಲ.

2. **ಆರ್ಥಿಕ ನೀತಿ ರೂಪಿಸಲು ನೆರವು:** ಸೂಕ್ಷ್ಮ ಅರ್ಥಶಾಸ್ತ್ರವು ಸೈದ್ಧಾಂತಿಕ ಮತ್ತು ವಾಸ್ತವಿಕ ಮಹತ್ವ ಹೊಂದಿದ್ದು, ಆರ್ಥಿಕ ಅಂಶಗಳನ್ನು ಬಿಡಿ ಬಿಡಿಯಾಗಿ ಅಧ್ಯಯನ ಮಾಡುವುದರ ಮೂಲಕ ಆರ್ಥಿಕ ನಿಯಮಗಳನ್ನು ಮತ್ತು ತನ್ಮೂಲಕ ಆರ್ಥಿಕ ನೀತಿಗಳನ್ನು ರೂಪಿಸಲು ನೆರವಾಗುತ್ತದೆ. ಅದು ಜನರ ಯೋಗಕ್ಷೇಮವನ್ನು ಹೆಚ್ಚಿಸಲು ಸೂಕ್ತ ತಂತ್ರಗಳನ್ನು ರೂಪಿಸುತ್ತದೆ. ಉದಾಹರಣೆಗೆ ಬೆಲೆ ನಿರ್ಧಾರದ ಸಿದ್ಧಾಂತದಿಂದ ಯಾವ ಸರಕಿಗೆ ತೆರಿಗೆ ವಿಧಿಸಬಹುದು ಮತ್ತು ಎಷ್ಟು ಪ್ರಮಾಣದಲ್ಲಿ ಎಂಬುದನ್ನು ನಿರ್ಧರಿಸಲು ನೆರವಾಗುವುದು. ಅದರೊಟ್ಟಿಗೆ ವ್ಯಕ್ತಿಗತ ಅನುಭೋಗಿಗಳು ಹಾಗೂ ಉತ್ಪಾದಕರ ಮೇಲೆ ಸರ್ಕಾರದ ನೀತಿಗಳ ಪರಿಣಾಮವನ್ನು ಮೌಲ್ಯೀಕರಿಸಲು ಸಹ ವಿಧಾನಗಳನ್ನು ಒದಗಿಸುತ್ತದೆ.

3. **ಸಂಪನ್ಮೂಲಗಳ ದಕ್ಷ ಉಪಯೋಗ/ ಹಂಚಿಕೆ:** ಪ್ರಸ್ತುತ ಸಂಪನ್ಮೂಲಗಳ ಬಳಕೆ ಮತ್ತು ವಿವಿಧ ಉಪಯೋಗಗಳ ನಡುವೆ ಅವುಗಳ ಹಂಚಿಕೆಯನ್ನು ವಿಶ್ಲೇಷಿಸಿ ಅದನ್ನು ಇನ್ನಷ್ಟು ಹೇಗೆ ದಕ್ಷ ಹಾಗೂ ಉಪಯುಕ್ತತೆಯನ್ನಾಗಿ ಮಾಡಬಹುದು ಎಂಬುದನ್ನು ಸೂಕ್ಷ್ಮ ಅರ್ಥಶಾಸ್ತ್ರವು ಅಧ್ಯಯನ ಮಾಡುತ್ತದೆ. ಇದರಿಂದ ವೆಚ್ಚವನ್ನು ತಗ್ಗಿಸಿ, ಅನುಕೂಲಗಳನ್ನು ಗರಿಷ್ಠವಾಗಿ ಗಳಿಸಲು ಸಹಾಯ ಮಾಡುತ್ತದೆ.
4. **ಮಾದರಿಗಳ ನಿರ್ಮಾಣ ಮತ್ತು ಬಳಕೆಗೆ ನೆರವು:** ಸೂಕ್ಷ್ಮ ಅರ್ಥಶಾಸ್ತ್ರವು ಆರ್ಥಿಕ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳಲು ಹಲವು ಮಾದರಿಗಳನ್ನು ಬಳಸಿಕೊಳ್ಳುತ್ತದೆ. ಮಾದರಿಗಳು ವಾಸ್ತವ ಸ್ಥಿತಿಯನ್ನು ಪರಿಭಾಷೆಗಳ ಮೂಲಕ ನಿರೂಪಿಸಿ ವಿಶ್ಲೇಷಿಸಲು ಸಹಾಯಕಾರಿಯಾಗುತ್ತವೆ. ಅಂದರೆ ನಿರ್ದಿಷ್ಟ ಆರ್ಥಿಕ ಸಮಸ್ಯೆಗಳನ್ನು ಪ್ರಭಾವಿಸುತ್ತಿರುವ ಅಂಶಗಳನ್ನು ಗುರುತಿಸಿ, ಅವುಗಳನ್ನು ಹೆಚ್ಚು ಕಡಿಮೆ ಮಾಡುವುದರ ಮೂಲಕ ಆ ಸಮಸ್ಯೆಯನ್ನು ಸರಿಪಡಿಸಬಹುದು ಎಂಬುದನ್ನು ತಿಳಿಸುತ್ತವೆ. ಆಕ್ಲೆ ಅವರ ಪ್ರಕಾರ ಸೂಕ್ಷ್ಮ ಅರ್ಥಶಾಸ್ತ್ರವು ಆರ್ಥಿಕ ಸಮಸ್ಯೆಗಳ ಪರಿಹಾರಕ್ಕೆ ಒಂದು ಸುಲಲಿತ ವಿಧಾನವಾಗಿದೆ.

5. **ವ್ಯವಹಾರ ನಿರ್ವಾಹಕರಿಗೆ ಉಪಯುಕ್ತ:** ಸೂಕ್ಷ್ಮ ಅರ್ಥಶಾಸ್ತ್ರದ ಜ್ಞಾನವು ವ್ಯವಹಾರದ ನಿರ್ವಾಹಕರು (ಮ್ಯಾನೇಜರುಗಳಿಗೆ) ಕನಿಷ್ಠ ವೆಚ್ಚ ಹಾಗೂ ಗರಿಷ್ಠ ಉತ್ಪಾದನೆಯನ್ನು ಗಳಿಸಲು ತಂತ್ರಗಳ ಆಯ್ಕೆ ಮತ್ತು ಅನುಷ್ಠಾನಕ್ಕೆ ನೆರವಾಗುತ್ತದೆ. ಇದು ಅನುಭೋಗಿಗಳ ಅಗತ್ಯಗಳು ಮತ್ತು ಉತ್ಪಾದನಾ ವೆಚ್ಚಗಳನ್ನು ಪರಿಗಣಿಸಿ ಏನನ್ನು ಎಷ್ಟು ಪ್ರಮಾಣದಲ್ಲಿ ಉತ್ಪಾದಿಸಬೇಕು ಮತ್ತು ಇತರ ಯಾವ ನಿರ್ಣಯಗಳನ್ನು ಕೈಗೊಳ್ಳಬೇಕು ಎಂದು ತಿಳಿಸುತ್ತದೆ.
6. **ಆರ್ಥಿಕ ಯೋಗಕ್ಷೇಮ ಹೆಚ್ಚಿಸಲು ಕ್ರಮಗಳನ್ನು ಸೂಚಿಸುತ್ತದೆ**: ಸೂಕ್ಷ್ಮ ಅರ್ಥಶಾಸ್ತ್ರವು ಆರ್ಥಿಕ ಯೋಗಕ್ಷೇಮದ ನಿಯಮಗಳನ್ನು ಸಿದ್ಧಪಡಿಸಲು ಮತ್ತು ಪರೀಕ್ಷಿಸಲು ನೆರವಾಗುತ್ತದೆ. ಜನರ ಜೀವನಮಟ್ಟವನ್ನು ಹಾಗೂ ಅದನ್ನು ನಿರ್ಧರಿಸುವ ಅಂಶಗಳನ್ನು ಅರ್ಥಮಾಡಿಕೊಳ್ಳಲು ಸೂಕ್ಷ್ಮ ಅರ್ಥಶಾಸ್ತ್ರ ಬಹು ಉಪಯುಕ್ತವಾಗಿದೆ. ಉದಾಹರಣೆಗೆ ಸರ್ಕಾರ ಯಾವ ಸರಕುಗಳನ್ನು ಹೇಗೆ ಪೂರೈಸುತ್ತದೆ. ಜನರ ಜೀವನ

ಮಟ್ಟ ಹೇಗಿದೆ? ಹಾಗೂ ಉತ್ತಮ ಜೀವನ ಮಟ್ಟದ ಮೇಲೆ ಪರಿಣಾಮ ಬೀರುವ ಅಂಶಗಳು ಯಾವುವು? ಎಂಬುದನ್ನು ತಿಳಿಸುತ್ತದೆ.

7. **ತೆರಿಗೆ ವಿಧಿಸುವಿಕೆಗೆ ಸಂಬಂಧಿಸಿದ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳಲು ಉಪಯುಕ್ತವಾಗಿದೆ:** ಯಾವುದೇ ತೆರಿಗೆಯು ಗ್ರಾಹಕರು ಮತ್ತು ಉತ್ಪಾದಕರು ಸೇರಿದಂತೆ ಎಲ್ಲ ವರ್ಗಗಳನ್ನು ಮತ್ತು ಎಲ್ಲ ಚಟುವಟಿಕೆಗಳು ಜನರನ್ನು ಪ್ರಭಾವಿಸುವುದರಿಂದ ಯಾವ ತೆರಿಗೆಯ ಪ್ರಭಾವ ಯಾರ ಮೇಲೆ ಹೇಗೆ ಪರಿಣಾಮ ಬೀರುತ್ತದೆ ಎಂದು ತಿಳಿಯಲು ಸೂಕ್ಷ್ಮ ಅರ್ಥಶಾಸ್ತ್ರವು ನೆರವಾಗುತ್ತದೆ. ಉದಾಹರಣೆಗೆ ಮಾರಾಟಗಾರರು ಮತ್ತು ಗ್ರಾಹಕರ ನಡುವೆ ಹಂಚಿಕೆಯಿರುವ ಸರಕಿನ ತೆರಿಗೆಯ ಹೊರೆಯನ್ನು ತಿಳಿಸುತ್ತದೆ.

## ಸೂಕ್ಷ್ಮ ಅರ್ಥಶಾಸ್ತ್ರದ ಮಿತಿಗಳು:

ಸೂಕ್ಷ್ಮ ಅರ್ಥಶಾಸ್ತ್ರವು ಕೆಲವು ಮಿತಿಗಳಿಂದ ಕೂಡಿದ್ದು, ಪ್ರಮುಖ ಮಿತಿಗಳೆಂದರೆ:

1. **ಅವಾಸ್ತವಿಕ ಊಹೆಗಳು:** ಸೂಕ್ಷ್ಮ ಅರ್ಥಶಾಸ್ತ್ರದ ವಿಧಾನವು ಕೆಲವು ಊಹೆಗಳ ಆಧಾರದ ಮೇಲೆ ತನ್ನ ಸಿದ್ಧಾಂತಗಳನ್ನು ರಚಿಸಿದೆ. ಅವುಗಳೆಂದರೆ ಜನರ ವಿವೇಚನಾಶೀಲ ನಡವಳಿಕೆ, ಅಧ್ಯಯನ ಮಾಡುತ್ತಿರುವ ಅಂಶಗಳ ಹೊರತಾಗಿ ಉಳಿದೆಲ್ಲ ಸಂಗತಿಗಳು ಸ್ಥಿರವಾಗಿರುತ್ತವೆ, ಪರಿಪೂರ್ಣ ಪೈಪೋಟಿ, ಸಂಪೂರ್ಣ ಜ್ಞಾನ ಇತ್ಯಾದಿ. ಇವುಗಳು ಸಂಕೀರ್ಣ ವಿಷಯಗಳನ್ನು ಸರಳೀಕರಿಸಲು ಮಾಡಿದ ಊಹೆಗಳಾಗಿದ್ದು, ವಾಸ್ತವದಲ್ಲಿ ಹೀಗೆ ಇರುವುದಿಲ್ಲ.
2. **ಆರ್ಥಿಕ ವ್ಯವಸ್ಥೆಯ ಸಮಗ್ರ ಹಾಗು ಸ್ಪಷ್ಟ ಚಿತ್ರಣ ನೀಡುವುದಿಲ್ಲ:** ಸೂಕ್ಷ್ಮ ಅರ್ಥಶಾಸ್ತ್ರವು ಕೇವಲ ಆರ್ಥಿಕತೆಯ ಭಾಗಗಳನ್ನು ಭಾಗಶಃ ಅಧ್ಯಯನ ಮಾಡುವುದರಿಂದ ಇದು ಇಡೀ ಆರ್ಥಿಕತೆಯ ಒಟ್ಟಾರೆ ಚಿತ್ರಣವನ್ನು ನೀಡುವುದಿಲ್ಲ. ಉದಾಹರಣೆಗೆ, ಒಂದು ವಸ್ತುವಿನ ಬೆಲೆಗಿಂತ ಒಟ್ಟಾರೆ ಬೆಲೆ ಪರಿಸ್ಥಿತಿಯು ಜನರ ಜೀವನ ಮಟ್ಟವನ್ನು ಅಧಿಕವಾಗಿ ಪರಿಣಮಿಸುತ್ತದೆ.

3. **ವ್ಯಕ್ತಿಯ ವಿಷಯದಲ್ಲಿ ನಿಜವಾದದ್ದು, ಒಟ್ಟಾರೆಯಾಗಿ ನಿಜವಾಗಬೇಕೆಂದಿಲ್ಲ:** ಒಬ್ಬ ವ್ಯಕ್ತಿಯ ಉಳಿತಾಯ ಅವನ ಕುಟುಂಬಕ್ಕೆ ಒಳ್ಳೆಯದು, ಆದರೆ ಒಟ್ಟಾರೆ ಸಮುದಾಯವು ಉಳಿತಾಯ ಮಾಡಲು ಪ್ರಾರಂಭಿಸಿದರೆ ಅದು ಬೇಡಿಕೆಯನ್ನು ಕುಸಿಯುವಂತೆ ಮಾಡಿ ಉತ್ಪಾದಕರಿಗೆ ನಷ್ಟವನ್ನು ಉಂಟುಮಾಡುತ್ತದೆ. ಇಂತಹ ಹಲವಾರು ನಿದರ್ಶನಗಳಿರುವುದರಿಂದ ಸೂಕ್ಷ್ಮ ಅರ್ಥಶಾಸ್ತ್ರದ ನಿರ್ಣಯಗಳನ್ನು ಸಮಗ್ರ ವ್ಯವಸ್ಥೆಗೆ ಅನ್ವಯಿಸುವಾಗ ಬಹಳ ಎಚ್ಚರಿಕೆಯನ್ನು ವಹಿಸಬೇಕು.
4. **ಮಿತ ವ್ಯಾಪ್ತಿ:** ಸೂಕ್ಷ್ಮ ಅರ್ಥಶಾಸ್ತ್ರವು ಮಿತವಾದ ವ್ಯಾಪ್ತಿಯನ್ನು ಹೊಂದಿದೆ. ಒಟ್ಟಾರೆ ಅರ್ಥವ್ಯವಸ್ಥೆಯ ಸ್ವರೂಪವನ್ನು ಹಾಗೂ ಚಲನೆಯನ್ನು ಅದು ಸಮರ್ಪಕವಾಗಿ

ವಿವರಿಸುವುದಿಲ್ಲ. ಮುಂದುವರೆದು ಹಲವು ಆರ್ಥಿಕ ಸಮಸ್ಯೆಗಳ ವಿಶ್ಲೇಷಣೆಯನ್ನು ಅದೊಂದೇ ಸಮಂಜಸವಾಗಿ ಮಾಡದಿರಬಹುದು.

### ಸಮಗ್ರ ಅರ್ಥಶಾಸ್ತ್ರ:

ಮ್ಯಾಕ್ರೋ ಎಂಬ ಪದವನ್ನು 'ಮ್ಯಾಕ್ರೋಸ್' ಎಂಬ ಗ್ರೀಕ್ ಪದದಿಂದ ಪಡೆಯಲಾಗಿದೆ. ಮ್ಯಾಕ್ರೋಸ್ ಎಂದರೆ ವಿಶಾಲವಾದದು ಎಂದರ್ಥ. ಸಮಗ್ರ ಅರ್ಥಶಾಸ್ತ್ರವು ಸಮಗ್ರ ಆರ್ಥಿಕ ಘಟಕಗಳನ್ನು ಅಂದರೆ ಇಡೀ ಆರ್ಥಿಕತೆಯ ಒಟ್ಟಾರೆ ವಿಷಯಗಳನ್ನು ಅಧ್ಯಯನ ಮಾಡುತ್ತದೆ. ಉದಾಹರಣೆಗೆ, ರಾಷ್ಟ್ರೀಯ ಆದಾಯ, ಒಟ್ಟು ಉದ್ಯೋಗ, ಒಟ್ಟು ಆದಾಯ, ಒಟ್ಟು ಉಳಿತಾಯ, ಒಟ್ಟು ಅನುಭೋಗ, ಒಟ್ಟಾರೆ ಬೆಲೆ ಸ್ಥಿತಿ, ಆರ್ಥಿಕ ಚಟುವಟಿಕೆಗಳ ಒಟ್ಟಾರೆ ಏರಿಳಿತ, ಇತ್ಯಾದಿ.

ಸಮಗ್ರ ಅರ್ಥಶಾಸ್ತ್ರದಲ್ಲಿ ನಾವು ಇಡೀ ಅರ್ಥವ್ಯವಸ್ಥೆಯ ಸಮಗ್ರ ಕಾರ್ಯನಿರ್ವಹಣೆಯನ್ನು ಅಭ್ಯಸಿಸುತ್ತೇವೆ. ಆದ್ದರಿಂದ ಸಮಗ್ರ ಅರ್ಥಶಾಸ್ತ್ರವನ್ನು ವಿಶಾಲ ಅಥವಾ ಸಮಷ್ಟಿ ಅರ್ಥಶಾಸ್ತ್ರ ಎಂತಲೂ ಕರೆಯುತ್ತಾರೆ. ಇಲ್ಲಿ ಒಂದು ಆರ್ಥಿಕ ವ್ಯವಸ್ಥೆ ಹೇಗೆ ಗರಿಷ್ಠ ಉತ್ಪಾದನೆ ಸಾಧಿಸುವುದು? ಜನರಿಗೆ ಉದ್ಯೋಗವಕಾಶಗಳ ಸೃಷ್ಟಿ ಹೇಗೆ? ಜನರ ಯೋಗಕ್ಷೇಮವನ್ನು ಹೇಗೆ ಗರಿಷ್ಠಗೊಳಿಸುವುದು? ಇತ್ಯಾದಿ ಅಂಶಗಳನ್ನು ಅಧ್ಯಯನ ಮಾಡಲಾಗುತ್ತದೆ. ಹಾಗಾಗಿ ಸಮಗ್ರ ಅರ್ಥಶಾಸ್ತ್ರವು ಅರಣ್ಯವನ್ನು ಇಡಿಯಾಗಿ ಅಭ್ಯಸಿಸುತ್ತದೆಯಾದ್ದರಿಂದ ಬಿಡಿಯಾದ ಮರಗಳನ್ನಲ್ಲ.

### *ಸಮಗ್ರ ಅರ್ಥಶಾಸ್ತ್ರದ ವ್ಯಾಖ್ಯೆಗಳು.*

ಪ್ರೊ. ಕೆನೆಥ್ ಇ. ಬೌಲ್ಡಿಂಗ್‌ರವರ ಪ್ರಕಾರ "ಸಮಗ್ರ ಅರ್ಥಶಾಸ್ತ್ರವು ವೈಯಕ್ತಿಕ ಪರಿಮಾಣಗಳ ಬದಲಾಗಿ ಸಮಗ್ರ ಪರಿಮಾಣಗಳನ್ನು, ವೈಯಕ್ತಿಕ ಆದಾಯಕ್ಕೆ ಬದಲಾಗಿ ರಾಷ್ಟ್ರಿಯ ಆದಾಯವನ್ನು, ವೈಯಕ್ತಿಕ ಬೆಲೆಗಳಿಗೆ ಬದಲಾಗಿ ಸಾಮಾನ್ಯ ಬೆಲೆ ಮಟ್ಟವನ್ನು, ವೈಯಕ್ತಿಕ ಉತ್ಪನ್ನಕ್ಕೆ ಬದಲಾಗಿ ರಾಷ್ಟ್ರಿಯ ಉತ್ಪನ್ನವನ್ನು ಅಧ್ಯಯನ ಮಾಡುತ್ತದೆ".

ಪ್ರೊ. ಮ್ಯಾಕೊನಲ್ ವ್ಯಾಖ್ಯಾನದಂತೆ "ಸಮಗ್ರ ಅರ್ಥಶಾಸ್ತ್ರವು ಇಡೀ ಆರ್ಥಿಕತೆಯನ್ನು ಬಿಂಬಿಸುವ ಸರ್ಕಾರದ, ಕುಟುಂಬಗಳ ಮತ್ತು ವ್ಯವಹಾರಗಳ ಒಟ್ಟಾರೆ ಅಧ್ಯಯನಕ್ಕೆ ಸಂಬಂಧಿಸಿದೆ".

ಮೇಲಿನ ವ್ಯಾಖ್ಯೆಗಳಿಂದ ಸಮಗ್ರ ಅರ್ಥಶಾಸ್ತ್ರವು ಆರ್ಥಿಕತೆಯನ್ನು ಒಟ್ಟಾಗಿ ಅಧ್ಯಯನ ಮಾಡುವ ಶಾಖೆಯೆಂಬುದು ಸ್ಪಷ್ಟವಾಗುತ್ತದೆ. ಇದು ಸಮಗ್ರತೆಯ ಅಧ್ಯಯನವಾಗಿದೆ. ಸಮಗ್ರ ಅರ್ಥಶಾಸ್ತ್ರವು ಪ್ರಮುಖ ಪರಿಕಲ್ಪನೆಗಳಾದ ಉತ್ಪನ್ನ ಮತ್ತು ಉದ್ಯೋಗ ಸಿದ್ಧಾಂತ, ಸಾಮಾನ್ಯ ಬೆಲೆಗಳ ಮಟ್ಟ ಮತ್ತು ಹಣದುಬ್ಬರ, ವ್ಯಾಪಾರ ಚಕ್ರಗಳು,

ಅನುಭೋಗ ಮತ್ತು ಒಟ್ಟು ಹೂಡಿಕೆ ಕಾರ್ಯ, ಒಟ್ಟು ಉಳಿತಾಯ, ಒಟ್ಟು ಬೇಡಿಕೆ, ಕೂಲಿಯ ಮಟ್ಟ, ಬಡ್ಡಿಯದರ, ಒಟ್ಟು ವೆಚ್ಚದ ಸ್ವರೂಪ, ಆರ್ಥಿಕ ಬೆಳವಣಿಗೆ ಮೊದಲಾದವನ್ನು ಅಭ್ಯಸಿಸುತ್ತದೆ.

## *ಸಮಗ್ರ ಅರ್ಥಶಾಸ್ತ್ರದ ಮಹತ್ವ:*

ಸಮಗ್ರ ಅರ್ಥಶಾಸ್ತ್ರದ ಮಹತ್ವವನ್ನು ಈ ಕೆಳಕಂಡಂತೆ ವಿವರಿಸಬಹುದು:

1. **ಆರ್ಥಿಕತೆಯ ಕಾರ್ಯಾಚರಣೆಯ ಅರಿವು:** ಸಮಗ್ರ ಅರ್ಥಶಾಸ್ತ್ರದ ಅಧ್ಯಯನವು ಆರ್ಥಿಕತೆಯ ಕಾರ್ಯ ವೈಖರಿಯನ್ನು ಅರಿಯಲು ಉಪಯುಕ್ತವಾಗಿದೆ. ಇದು ಆರ್ಥಿಕತೆಯ ರಾಷ್ಟ್ರೀಯ ಆದಾಯ, ಸಮಗ್ರ ಬೇಡಿಕೆ, ಸಮಗ್ರ ಪೂರೈಕೆ, ಉತ್ಪನ್ನ, ಉದ್ಯೋಗ ಮತ್ತು ಸಾಮಾನ್ಯ ಬೆಲೆಗಳ ಮಟ್ಟದ ಪ್ರವೃತ್ತಿ ಮುಂತಾದುವುಗಳನ್ನು ತಿಳಿಸುತ್ತದೆ.
2. **ಅರ್ಥವ್ಯವಸ್ಥೆಯ ಸ್ಪಷ್ಟ ಚಿತ್ರಣ:** ಸಮಗ್ರ ಅರ್ಥಶಾಸ್ತ್ರವು ಆರ್ಥಿಕತೆಯ ಕಾರ್ಯಾಚರಣೆ ಅರಿಯಲು ನೆರವಾಗುವುದಲ್ಲದೆ, ಅರ್ಥವ್ಯವಸ್ಥೆಯ ಸ್ಪಷ್ಟ ಚಿತ್ರಣವನ್ನು ನೀಡುವುದು. ಉದಾಹರಣೆಗೆ ಸಮಗ್ರ ಬೇಡಿಕೆ, ಸಮಗ್ರ ಪೂರೈಕೆ ಇತರೆ ಅಂಶಗಳ ಬಗ್ಗೆ ಸ್ಪಷ್ಟ ಚಿತ್ರಣ ನೀಡುವುದು.
3. **ಆರ್ಥಿಕ ನೀತಿಗಳನ್ನು ರೂಪಿಸಲು ಉಪಯುಕ್ತಕಾರಿ:** ಅಭಿವೃದ್ಧಿಶೀಲ ದೇಶಗಳು ಆರ್ಥಿಕ ಸಮಸ್ಯೆಗಳಾದ ಹಣದುಬ್ಬರ, ಮುಗ್ಗಟ್ಟು, ಕೊರತೆ ಪಾವತಿಶಿಲ್ಲು, ನಿರುದ್ಯೋಗ, ಜನಸಂಖ್ಯಾಸ್ಫೋಟ, ಇತ್ಯಾದಿ ಸಮಸ್ಯೆಗಳನ್ನು ಎದುರಿಸುತ್ತಿದ್ದು, ಅವುಗಳನ್ನು ಪರಿಹರಿಸಲು ಸಮಗ್ರ ಅರ್ಥಶಾಸ್ತ್ರವು ಉಪಯುಕ್ತವಾಗಿದೆ. ಇದು ಆರ್ಥಿಕ ನೀತಿಗಳನ್ನು ರೂಪಿಸಲು ಬಹಳ ಉಪಯುಕ್ತವಾಗಿದೆ.
4. **ಆರ್ಥಿಕ ಬೆಳವಣಿಗೆಯ ಅಧ್ಯಯನಕ್ಕೆ ಉಪಯುಕ್ತ:** ಸಮಗ್ರ ಅರ್ಥಶಾಸ್ತ್ರವು ಆರ್ಥಿಕ ಸಂಪನ್ಮೂಲಗಳ ಮಟ್ಟ ಮತ್ತು ಸಾಮರ್ಥವನ್ನು ತಿಳಿಯಲು ಸಹಾಯಕವಾಗಿದೆ. ಸಮಗ್ರ ಅರ್ಥಶಾಸ್ತ್ರದ ಜ್ಞಾನದಿಂದ ರಾಷ್ಟ್ರೀಯ ಆದಾಯ, ಉತ್ಪನ್ನ ಮತ್ತು ಉದ್ಯೋಗಾವಕಾಶಗಳನ್ನು ಹೆಚ್ಚಿಸುವ ಯೋಜನೆಗಳನ್ನು ರೂಪಿಸಲು ಮತ್ತು ಆರ್ಥಿಕ ಅಭಿವೃದ್ಧಿ ಮಟ್ಟವನ್ನು ಹೆಚ್ಚಿಸಲು ನೆರವಾಗುವುದು.
5. **ರಾಷ್ಟ್ರೀಯ ಆದಾಯದ ಮಾಪನ:** ಇದು ರಾಷ್ಟ್ರೀಯ ಆದಾಯದ ಮಾಪನ ಮತ್ತು ಹಂಚಿಕೆಯನ್ನು ತಿಳಿಯಲು ಸಹ ಸಹಾಯಕವಾಗಿದೆ. ಬಡತನ, ನಿರುದ್ಯೋಗ, ಅಸಮಾನತೆಯಂತಹ ಇತರೆ ಪರಿಕಲ್ಪನೆಗಳನ್ನು ಅಧ್ಯಯನ ಮಾಡಲು ನೆರವಾಗುವುದು.
6. **ಆರ್ಥಿಕ ಆವರ್ತಗಳು:** ಸಮಗ್ರ ಆರ್ಥಿಕ ಅಂಶಗಳಲ್ಲಿನ ಏರಿಳಿತಗಳನ್ನು ಆರ್ಥಿಕ ಆವರ್ತಗಳೆಂದೂ ಕರೆಯಲಾಗುತ್ತದೆ. ಈ ಆರ್ಥಿಕ ಏರಿಳಿತಗಳಿಗೆ ಕಾರಣಗಳನ್ನು

ವಿಶ್ಲೇಷಿಸಿ ಅವುಗಳನ್ನು ನಿಯಂತ್ರಿಸುವ ಕ್ರಮಗಳನ್ನು ಸೂಚಿಸಲು ಸಮಗ್ರ ಅರ್ಥಶಾಸ್ತ್ರ ನೆರವಾಗುತ್ತದೆ.

### *ಸಮಗ್ರ ಅರ್ಥಶಾಸ್ತ್ರದ ಮಿತಿಗಳು:*

ಸಮಗ್ರ ಅರ್ಥಶಾಸ್ತ್ರವು ಕೆಲವು ಮಿತಗಳನ್ನು ಹೊಂದಿದೆ, ಅವುಗಳೆಂದರೆ:

1. **ಅತಿಯಾದ ಸಾಮಾನ್ಯೀಕರಣ:** ವಿಷಯಗಳನ್ನು ಮತ್ತು ನಿರ್ಣಯಗಳನ್ನು ಅತಿಯಾಗಿ ಸಾಮಾನ್ಯೀಕರಣವಾಗಿಸುವುದು ಸಮಗ್ರ ಅರ್ಥಶಾಸ್ತ್ರದ ಪ್ರಮುಖ ಮಿತಿಯಾಗಿದೆ. ಇದರ ಫಲಿತಾಂಶ ತಪ್ಪು ನಿರ್ಣಯಗಳಿಗೆ ದಾರಿಯಾಗುವುದು.
2. **ಸೂಕ್ಷ್ಮ ಅಧ್ಯಯನದ ನಿರ್ಲಕ್ಷ್ಯ:** ಸಮಗ್ರ ಅರ್ಥಶಾಸ್ತ್ರವು ಸೂಕ್ಷ್ಮ ಅಧ್ಯಯನವನ್ನು ಒಳಗೊಳ್ಳದೇ ಇರುವುದರಿಂದ ಅಪೂರ್ಣವಾಗಿದೆ. ಆದ್ದರಿಂದ ನಮಗೆ ಅಪೂರ್ಣ ಮಾಹಿತಿ ಲಭ್ಯವಾಗುವುದು. ಉದಾಹರಣೆಗೆ ಸರಾಸರಿ ಅಂಶಗಳಿಗೆ ನಿಜವಾದದ್ದು, ವೈಯಕ್ತಿಕ ಅಂಶಗಳಿಗೆ ನಿಜವಾಗಬೇಕೆಂದೇನೂ ಇಲ್ಲ.

3. ಸಂಖ್ಯಾಶಾಸ್ತ್ರೀಯ ಮತ್ತು ಪರಿಕಲ್ಪನಾತ್ಮಕ ತೊಂದರೆಗಳು: ಬಹಳಷ್ಟು ರಾಷ್ಟ್ರಗಳಲ್ಲಿ ಅಂಕಿ ಸಂಖ್ಯೆ ಸಂಗ್ರಹಿಸುವ ವ್ಯವಸ್ಥೆ ಸೂಕ್ತವಾಗಿ ರೂಪಿತವಾಗಿಲ್ಲದ್ದರಿಂದ ಸಮಗ್ರ ಅರ್ಥಶಾಸ್ತ್ರದ ಮಾಪನವು ಹಲವಾರು ಸಂಖ್ಯಾಶಾಸ್ತ್ರೀಯ ಮತ್ತು ಪರಿಕಲ್ಪನಾತ್ಮಕ ತೊಂದರೆಗಳನ್ನು ಎದುರಿಸುತ್ತಿದೆ. ಇದರಿಂದಾಗಿಯೂ ಸಹ ಅದರ ನಿರ್ಣಯಗಳು ಸೂಕ್ತವಾಗಿರದೇ ಇರಬಹುದು.

## **ಸೂಕ್ಷ್ಮ ಮತ್ತು ಸಮಗ್ರ ಅರ್ಥಶಾಸ್ತ್ರದ ನಡುವಿನ ವ್ಯತ್ಯಾಸಗಳು:**

ಸೂಕ್ಷ್ಮ ಮತ್ತು ಸಮಗ್ರ ಅರ್ಥಶಾಸ್ತ್ರದ ನಡುವಿನ ಪ್ರಮುಖ ವ್ಯತ್ಯಾಸಗಳೆಂದರೆ:

1. ಸೂಕ್ಷ್ಮ ಅರ್ಥಶಾಸ್ತ್ರದಲ್ಲಿ ನಿರ್ದಿಷ್ಟ ಉದ್ಯಮ, ನಿರ್ದಿಷ್ಟ ಕೈಗಾರಿಕೆ, ನಿರ್ದಿಷ್ಟ ಸರಕು, ನಿರ್ದಿಷ್ಟ ಕುಟುಂಬ, ನಿರ್ದಿಷ್ಟ ಬೆಲೆ, ಒಂದು ಸರಕಿಗೆ ಅನುಭೋಗಿಯ ಬೇಡಿಕೆ ಇತ್ಯಾದಿ ವೈಯಕ್ತಿಕ ಆರ್ಥಿಕ ಘಟಕಗಳ ಅಧ್ಯಯನ ಮಾಡಲಾಗುತ್ತದೆ. ಆದರೆ ಸಮಗ್ರ ಅರ್ಥಶಾಸ್ತ್ರವು ಆರ್ಥಿಕತೆಯ ಸಮಗ್ರ ಮತ್ತು ಒಟ್ಟಾರೆ ಅಂಶಗಳನ್ನು ಅಧ್ಯಯನ ಮಾಡುತ್ತದೆ. ಉದಾಹರಣೆ: ಒಟ್ಟು ಬೇಡಿಕೆ, ಒಟ್ಟು ಪೂರೈಕೆ, ಒಟ್ಟು ಉದ್ಯೋಗ, ಒಟ್ಟು ರಾಷ್ಟ್ರೀಯ ವರಮಾನ, ಒಟ್ಟು ಅನುಭೋಗ, ಒಟ್ಟು ಉಳಿತಾಯ, ಸಾರ್ವತ್ರಿಕ ಬೆಲೆ ಸ್ಥಿತಿ ಇತ್ಯಾದಿ.
2. ಸೂಕ್ಷ್ಮ ಅರ್ಥಶಾಸ್ತ್ರದ ಮೂಲ ಉದ್ದೇಶ ಮಾರುಕಟ್ಟೆಯಲ್ಲಿ ಬೆಲೆ ನಿರ್ಧಾರದ ಆಯಾಮಗಳನ್ನು ಅಭ್ಯಸಿಸುವುದಾಗಿದ್ದು, ಇದನ್ನು ಅದು ವ್ಯಕ್ತಿಗತ ಬೇಡಿಕೆ ಮತ್ತು ಪೂರೈಕೆಯ ಅಂಶಗಳನ್ನು ಬಳಸಿಕೊಂಡು ವಿಶ್ಲೇಷಿಸುತ್ತದೆ. ಇದು

ಮಾರುಕಟ್ಟೆಯಲ್ಲಿ ಸಮತೋಲನ ಬೆಲೆ ನಿರ್ಧಾರವಾಗಲು ನೆರವಾಗುವುದು. ಆದರೆ ಸಮಗ್ರ ಅರ್ಥಶಾಸ್ತ್ರವು ಸಮಗ್ರ ಬೇಡಿಕೆ ಮತ್ತು ಪೂರೈಕೆಗಳಂಥ ಅಂಶಗಳಿಂದ ರಾಷ್ಟ್ರೀಯ ಆದಾಯ, ಒಟ್ಟು ಉದ್ಯೋಗ ಮತ್ತು ಒಟ್ಟಾರೆ ಬೆಲೆ ಮಟ್ಟಗಳನ್ನು ಹೇಗೆ ನಿರ್ಧರಿತವಾಗುತ್ತವೆ ಎಂದು ತಿಳಿಯುವ ಮೂಲ ಉದ್ದೇಶವನ್ನು ಹೊಂದಿದೆ.

3. ಸೂಕ್ಷ್ಮ ಅರ್ಥಶಾಸ್ತ್ರದ ವ್ಯಾಪ್ತಿಯು ಮಿತವಾಗಿದ್ದು, ಸಮಗ್ರ ಅರ್ಥಶಾಸ್ತ್ರದ ವ್ಯಾಪ್ತಿಯು ವಿಶಾಲವಾಗಿದೆ.
4. ಸೂಕ್ಷ್ಮ ಅರ್ಥಶಾಸ್ತ್ರವು ಅರ್ಥವ್ಯವಸ್ಥೆಯ ಯಾವುದೇ ಒಂದು ಅಂಶದ ಅಧ್ಯಯನವಾದರೆ, ಸಮಗ್ರ ಅರ್ಥಶಾಸ್ತ್ರವು ಇಡೀ ಅರ್ಥವ್ಯವಸ್ಥೆಯನ್ನು ಅಭ್ಯಸಿಸುವುದಾಗಿದೆ.
5. ಸೂಕ್ಷ್ಮ ಅರ್ಥಶಾಸ್ತ್ರವು ರಾಷ್ಟ್ರೀಯ ವರಮಾನವನ್ನು ಉತ್ಪಾದನಾಂಗಗಳಲ್ಲಿ ಹಂಚಿಕೆ ಮಾಡುವುದನ್ನು ಅಧ್ಯಯನ ಮಾಡುತ್ತದೆ. ಆದರೆ ಸಮಗ್ರ ಅರ್ಥಶಾಸ್ತ್ರವು ಸಮಗ್ರ ವರಮಾನದ ಸೃಷ್ಟಿ, ಅದರಲ್ಲಿನ ಏರಿಳಿತ ಮತ್ತು ಅದರಿಂದ ಸೇವೆ ಮತ್ತು ಹೂಟೆಯಲ್ಲಿ ಆಗುವ ಪ್ರಸರಣವನ್ನು ಅಧ್ಯಾಯ ಮಾಡುತ್ತದೆ.

## ಅಭ್ಯಾಸ

**I. ಈ ಕೆಳಗಿನ ಪ್ರಶ್ನೆಗಳಿಗೆ ನಾಲ್ಕು ಪರ್ಯಾಯ ಉತ್ತರಗಳನ್ನು ಕೊಡಲಾಗಿದೆ ಅವುಗಳಲ್ಲಿ ಸೂಕ್ತವಾದ ಉತ್ತರವನ್ನು ಆರಿಸಿ ಬರೆಯಿರಿ.**

1) ಸೂಕ್ಷ್ಮ ಅರ್ಥಶಾಸ್ತ್ರವು ವೈಯಕ್ತಿಕ ಉತ್ಪಾದಕ ಹೇಗೆ ಗರಿಷ್ಠ ಲಾಭ ಮತ್ತು ________ವೆಚ್ಚವನ್ನು ಸಾಧಿಸುತ್ತಾನೆ ಎಂಬುದನ್ನು ಅಧ್ಯಯನ ಮಾಡುತ್ತದೆ.

ಅ) ಕನಿಷ್ಠ
ಆ) ಗರಿಷ್ಠ
ಇ) ಸರಾಸರಿ
ಈ) ಸಮ

2) ಸಮಗ್ರ ಅರ್ಥಶಾಸ್ತ್ರವು ಅರ್ಥವ್ಯವಸ್ಥೆಯನ್ನು ________ವಾಗಿ ಅಧ್ಯಯನ ಮಾಡುತ್ತದೆ.

ಅ) ಭಾಗಶಃ
ಆ) ಸಂಪೂರ್ಣ
ಇ) ವ್ಯಕ್ತಿಗತ
ಈ) ಮೇಲಿನ ಯಾವುದೂ ಅಲ್ಲ

3) ಸೂಕ್ಷ್ಮ ಅರ್ಥಶಾಸ್ತ್ರವು ಅರ್ಥವ್ಯವಸ್ಥೆಯ _______ ನ್ನು ಅಧ್ಯಯನ ಮಾಡುತ್ತದೆ.

ಅ) ನಿರ್ದಿಷ್ಟ ಘಟಕಗಳ
ಆ) ನಿರ್ದಿಷ್ಟ ಕುಟುಂಬಗಳ
ಇ) ಒಟ್ಟು ಅನುಭೋಗವ
ಈ) ಅ ಮತ್ತು ಆ

4) ಸಮಗ್ರ ಅರ್ಥಶಾಸ್ತ್ರದ ಅಧ್ಯಯನದ ವಿಷಯ ವಸ್ತು ಎಂದರೆ _______

ಅ) ಸಮಗ್ರ ಬೇಡಿಕೆ
ಆ) ಒಟ್ಟು ಉದ್ಯೋಗ
ಇ) ರಾಷ್ಟ್ರೀಯ ಆದಾಯ
ಈ) ಮೇಲಿನ ಎಲ್ಲವೂ

5) ಸಮಗ್ರ ಅರ್ಥಶಾಸ್ತ್ರದ ಪ್ರಮುಖ ದೋಷವೆಂದರೆ ಅತಿಯಾದ _______

ಅ) ವೈಯಕ್ತಿಕತೆ
ಆ) ಸಾಮಾನ್ಯೀಕರಣ
ಇ) ಮಾಹಿತಿ
ಈ) ಮೇಲಿನ ಯಾವುದೂ ಅಲ್ಲ

## II. ಈ ಕೆಳಗಿನ ವಾಕ್ಯಗಳಲ್ಲಿ ಖಾಲಿ ಬಿಟ್ಟ ಸ್ಥಳಗಳನ್ನು ತುಂಬಿರಿ.

1. ಸೂಕ್ಷ್ಮ ಅರ್ಥಶಾಸ್ತ್ರವು ಅರ್ಥವ್ಯವಸ್ಥೆಯನ್ನು _______ಆಗಿ ಅಧ್ಯಯನ ಮಾಡುವುದು.
2. _______ ಅರ್ಥಶಾಸ್ತ್ರವು ಜನರ ಜೀವನದ ಗುಣಮಟ್ಟವನ್ನು ಅರ್ಥಮಾಡಿಕೊಳ್ಳಲು ಸಹಾಯಕವಾಗಿದೆ.
3. _______ ಎಂಬುದು ಸಮಗ್ರ ಅಧ್ಯಯನವಾಗಿದೆ.
4. _______ ಆರ್ಥಿಕ ನೀತಿಗಳಲ್ಲಿ ರೂಪಿಸಲು ಉಪಯುಕ್ತಕಾರಿಯಾಗಿದೆ.
5. ಒಟ್ಟು ಉದ್ಯೋಗ ಎಂಬುದು _______ ಅರ್ಥಶಾಸ್ತ್ರಕ್ಕೆ ಒಂದು ಉದಾಹರಣೆಯಾಗಿದೆ.

## III. ಈ ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.

1. ಮೈಕ್ರೋಸ್‌ನ ಅರ್ಥ ಬರೆಯಿರಿ.
2. ಮ್ಯಾಕ್ರೋಸ್‌ನ ಅರ್ಥ ಬರೆಯಿರಿ.
3. ಸೂಕ್ಷ್ಮ ಅರ್ಥಶಾಸ್ತ್ರಕ್ಕೆ ಎರಡು ಉದಾಹರಣೆ ಕೊಡಿ.

4. ಸಮಗ್ರ ಅರ್ಥಶಾಸ್ತ್ರಕ್ಕೆ ಎರಡು ಉದಾಹರಣೆ ಕೊಡಿ.

5. ಅಧ್ಯಯನದ ವ್ಯಾಪ್ತಿಯ ಆಧಾರದ ಮೇಲೆ ಸೂಕ್ಷ್ಮ ಮತ್ತು ಸಮಗ್ರ ಅರ್ಥಶಾಸ್ತ್ರಗಳ ನಡುವಿನ ವ್ಯತ್ಯಾಸ ಬರೆಯಿರಿ.

**IV. ಈ ಕೆಳಗಿನ ಪ್ರಶ್ನೆಗಳಿಗೆ ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿ.**

1. ಸೂಕ್ಷ್ಮ ಅರ್ಥಶಾಸ್ತ್ರದಲ್ಲಿ ನೀವು ಏನನ್ನು ಅಧ್ಯಯನ ಮಾಡುವಿರಿ.
2. ಸಮಗ್ರ ಅರ್ಥಶಾಸ್ತ್ರದಲ್ಲಿ ನೀವು ಏನನ್ನು ಅಧ್ಯಯನ ಮಾಡುವಿರಿ.
3. ಆರ್ಥಿಕ ನೀತಿಗಳ ರಚನೆಯನ್ನು ಅರ್ಥಮಾಡಿಕೊಳ್ಳುವಲ್ಲಿ ಸಮಗ್ರ ಅರ್ಥಶಾಸ್ತ್ರವು ಹೇಗೆ ಸಹಾಯಕವಾಗಿದೆ.
4. ಅರ್ಥವ್ಯವಸ್ಥೆಯ ಕಾರ್ಯಾಚರಣೆಯನ್ನು ತಿಳಿಯುವಲ್ಲಿ ಸಮಗ್ರ ಅರ್ಥಶಾಸ್ತ್ರವು ಹೇಗೆ ಸಹಾಯಕವಾಗಿದೆ.
5. ಸೂಕ್ಷ್ಮ ಮತ್ತು ಸಮಗ್ರ ಅರ್ಥಶಾಸ್ತ್ರಗಳ ನಡುವಿನ ವ್ಯತ್ಯಾಸ ಬರೆಯಿರಿ.

**V. ಈ ಕೆಳಗಿನ ಪ್ರಶ್ನೆಗಳಿಗೆ ಎಂಟು ವಾಕ್ಯಗಳಲ್ಲಿ ಉತ್ತರಿಸಿ.**

1. ಸೂಕ್ಷ್ಮ ಅರ್ಥಶಾಸ್ತ್ರದ ಗುಣಗಳನ್ನು ಸಂಕ್ಷಿಪ್ತವಾಗಿ ಚರ್ಚಿಸಿ.
2. ಸೂಕ್ಷ್ಮ ಅರ್ಥಶಾಸ್ತ್ರದ ಗುಣಗಳನ್ನು ಕುರಿತು ಟಿಪ್ಪಣಿ ಬರೆಯಿರಿ.
3. ಸೂಕ್ಷ್ಮ ಅರ್ಥಶಾಸ್ತ್ರದ ಮಿತಿಗಳನ್ನು ಸಂಕ್ಷಿಪ್ತವಾಗಿ ಚರ್ಚಿಸಿ.
4. ಸಮಗ್ರ ಅರ್ಥಶಾಸ್ತ್ರದ ವಿವಿಧ ಮಿತಿಗಳನ್ನು ತಿಳಿಸಿ.
5. ಸೂಕ್ಷ್ಮ ಮತ್ತು ಸಮಗ್ರ ಅರ್ಥಶಾಸ್ತ್ರಗಳ ನಡುವಿನ ವ್ಯತ್ಯಾಸಗಳನ್ನು ಪಟ್ಟಿ ಮಾಡಿರಿ.

**ನಿಯೋಜಿತ ಕಾರ್ಯ:**

ನಿಮ್ಮ ಅನುಭವಕ್ಕೆ ಬಂದ ಸೂಕ್ಷ್ಮ ಮತ್ತು ಸಮಗ್ರ ಅರ್ಥಶಾಸ್ತ್ರಗಳ ವಿವಿಧ ಉದಾಹರಣೆಗಳ ಪಟ್ಟಿಯನ್ನು ಸಿದ್ಧಪಡಿಸಿ.

## ಅಧ್ಯಾಯ-2: ಮಾರುಕಟ್ಟೆ ಸಂರಚನೆ

"ಒಂದು ಸರ್ಕಾರಕ್ಕೆ ಪ್ರಜಾಪ್ರಭುತ್ವವಿದ್ದ ಹಾಗೆ, ಅರ್ಥಶಾಸ್ತ್ರಕ್ಕೆ ಒಂದು ಮಾರುಕಟ್ಟೆ ಆರ್ಥಿಕತೆಯಾಗಿದೆ. ಒಂದು ಸಭ್ಯ, ಒಂದು ವೇಳೆ ದೋಷಪೂರಿತವಾಗಿದ್ದರೆ, ಅದು ಹಲವು ಕೆಟ್ಟ ಪರ್ಯಾಯಗಳ ನಡುವಿನ ಆಯ್ಕೆಯಾಗಿದ್ದೆ". ಚಾರ್ಲೆಸ್ ವೀಲಾನ್

### ಪೀಠಿಕೆ:

ವಿವಿಧ ಸರಕು ಹಾಗೂ ಸೇವೆಗಳನ್ನು ಕೊಳ್ಳುವವರ ಮತ್ತು ಮಾರುವವರ ಮಧ್ಯೆ ಏರ್ಪಡುವ ವಿನಿಮಯ ವ್ಯವಸ್ಥೆಯನ್ನು ಮಾರುಕಟ್ಟೆ ಎಂದು ಕರೆಯಬಹುದು. ಸ್ವಾಭಾವಿಕವಾಗಿ ಯಾವುದೇ ಮಾರುಕಟ್ಟೆಯಲ್ಲಿ ಗ್ರಾಹಕರು ಮತ್ತು ಮಾರುವವರು ಬೆಲೆ ನಿರ್ಧಾರ ಮಾಡುವಲ್ಲಿ ಮತ್ತು ವಿನಿಮಯವಾದ ಸರಕು-ಸೇವೆಗಳ ಮೊತ್ತವನ್ನು ಪ್ರಭಾವಿಸುವ ಸಾಮರ್ಥ್ಯವನ್ನು ಎಷ್ಟರ ಮಟ್ಟಿಗೆ ಹೊಂದಿದ್ದಾರೆ ಎಂಬುದು ಮಾರುಕಟ್ಟೆ ಸಂರಚನೆಯನ್ನು ನಿರ್ಧರಿಸುತ್ತದೆ. ಗ್ರಾಹಕರು ಮತ್ತು ಮಾರುವವರು ಬೆಲೆ ಮತ್ತು ಸರಕು ಹಾಗೂ ಸೇವೆಗಳ ಮೊತ್ತವನ್ನು ಪ್ರಭಾವಿಸುವ ಸಾಮರ್ಥ್ಯದ ಆಧಾರದ ಮೇಲೆ ಹಲವು ಮಾರುಕಟ್ಟೆ ಸನ್ನಿವೇಶಗಳಿವೆ. ಅವು ಯಾವುವು? ಪರಿಪೂರ್ಣ ಮತ್ತು ಅಪರಿಪೂರ್ಣ ಪೈಪೋಟಿ ಮಾರುಕಟ್ಟೆ ಎಂದರೇನು? ಅಪರಿಪೂರ್ಣ ಪೈಪೋಟಿ ಮಾರುಕಟ್ಟೆಯ ವಿಧಗಳಾವುವು? ಅವುಗಳ ಲಕ್ಷಣಗಳೇನು? ಪ್ರಸ್ತುತ ಅಧ್ಯಾಯವು ಮಾರುಕಟ್ಟೆ ಸಂರಚನೆಯನ್ನು ಅರ್ಥಮಾಡಿಕೊಳ್ಳಲು ಮತ್ತು ಈ ಪ್ರಶ್ನೆಗಳಿಗೆ ಉತ್ತರಗಳನ್ನು ಒದಗಿಸುತ್ತದೆ.

### ಅರ್ಥ:

ಯಾವುದೇ ಒಂದು ಸರಕನ್ನು ಕೊಳ್ಳುವ ಅಥವಾ ಮಾರುವ ಸಂದರ್ಭದಲ್ಲಿ ಪರಿಗಣಿಸುವ ಮೂಲ ಲಕ್ಷಣಗಳಾದ ಸರಕಿನ ಸ್ವರೂಪ, ಮಾರುವವರ ಮತ್ತು ಕೊಳ್ಳುವವರ ಸಂಖ್ಯೆ, ಅಂತಿಮ ಬೆಲೆ ಮತ್ತು ಮಾರಾಟವಾದ ಸರಕಿನ ಮೊತ್ತವನ್ನು ನಿರ್ಧರಿಸುವಲ್ಲಿ ಅವರು ಬೀರುವ ಪ್ರಭಾವ ಮತ್ತು ಅವರ ವಿವಿಧ ಚಟುವಟಿಕೆಗಳನ್ನು ಒಟ್ಟಾಗಿ ಮಾರುಕಟ್ಟೆ ಸಂರಚನೆ ಎಂದು ಕರೆಯುತ್ತೇವೆ. ಮಾರುಕಟ್ಟೆ ಸಂರಚನೆಯನ್ನು "ಮಾರುವವರ ಮತ್ತು ಕೊಳ್ಳುವವರ ಸಂಖ್ಯೆ ಅವರವರ ಸಾಮರ್ಥ್ಯಗಳು, ಅವರ ನಡುವಿನ ಪೈಪೋಟಿ ಹಾಗೂ ಹೊಂದಾಣಿಕೆ ತಂತ್ರಗಳಲ್ಲದೇ, ಸರಕುಗಳ ಭಿನ್ನತೆ, ಇತರರು ಮಾರುಕಟ್ಟೆಯನ್ನು ಪ್ರವೇಶಿಸುವ ಮತ್ತು ನಿರ್ಗಮಿಸುವವರಿಗೆ ಇರುವ ಅವಕಾಶಗಳಂಥ ಮುಂತಾದ ಪರಸ್ಪರಾವಲಂಬಿತ ಲಕ್ಷಣಗಳು" ಎಂದು ವ್ಯಾಖ್ಯಾನಿಸಬಹುದು.

### ಮಾರುಕಟ್ಟೆ ಸಂರಚನೆಯ ನಿರ್ಧಾರಕಗಳು:

ಚರ್ಚಿಸಿದ ವ್ಯಾಖ್ಯೆಯು ಮಾರುಕಟ್ಟೆ ಸಂರಚನೆಯ ಪ್ರಮುಖ ನಿರ್ಧಾರಕ ಅಂಶಗಳನ್ನು ಗುರ್ತಿಸುತ್ತದೆ, ಅವುಗಳಲ್ಲಿ ಪ್ರಮುಖವಾಗಿ;

1. ಮಾರುವವರು ಮತ್ತು ಕೊಳ್ಳುವವರ ಸಂಖ್ಯೆ
2. ಮಾರುವವರು ಮತ್ತು ಕೊಳ್ಳುವವರ ಸಾಪೇಕ್ಷ ಸಾಮರ್ಥ್ಯ
3. ಸರಕಿನ ಸ್ವರೂಪ
4. ಮಾರುಕಟ್ಟೆಯ ಪ್ರವೇಶ ಮತ್ತು ಅಲ್ಲಿಂದ ನಿರ್ಗಮಿಸಲಿಕ್ಕೆ ಇರುವ ನಿಯಮಗಳು
5. ಬಾಹ್ಯ ಪ್ರಭಾವಗಳ ಸ್ವರೂಪ ಉದಾಹರಣೆ ಜಾಹೀರಾತು, ಸರ್ಕಾರದ ನೀತಿ, ಇತ್ಯಾದಿ
6. ಮಾರುಕಟ್ಟೆ ಮಾಹಿತಿಯ ಮಟ್ಟ

ಈ ಲಕ್ಷಣಗಳಲ್ಲಿನ ಭಿನ್ನತೆಯ ಕಾರಣದಿಂದಾಗಿ ವಿವಿಧ ಹಂತದ ಪೈಪೋಟಿ ಉಂಟಾಗಿ ಮಾರುಕಟ್ಟೆಯಲ್ಲಿ ಹಲವಾರು ವಿಧಗಳು ಉಂಟಾಗುತ್ತವೆ. ಮಾರುಕಟ್ಟೆ ವಿಧಗಳು ಕೊಳ್ಳುವವರ ಹಾಗೂ ಮಾರುವವರ ಮಧ್ಯೆ ಹಾಗೂ ಪರಸ್ಪರವಾಗಿ ಏರ್ಪಡುವ ಪೈಪೋಟಿಯ ಆಧಾರದ ಮೇಲೆ ಮಾರುಕಟ್ಟೆ ವಿಧಗಳನ್ನು ವಿಂಗಡಿಸಲಾಗುತ್ತದೆ. ಪ್ರಮುಖವಾಗಿ ಮಾರುಕಟ್ಟೆಗಳನ್ನು ಪರಿಪೂರ್ಣ ಪೈಪೋಟಿ ಮಾರುಕಟ್ಟೆ ಮತ್ತು ಅಪರಿಪೂರ್ಣ ಪೈಪೋಟಿ ಮಾರುಕಟ್ಟೆ ಎಂದು ವರ್ಗೀಕರಿಸಲಾಗಿದ್ದು, ಅಪರಿಪೂರ್ಣ ಪೈಪೋಟಿ ಮಾರುಕಟ್ಟೆಯ ಉಪವಿಧಗಳನ್ನು ಹೀಗೆ ಗುರುತಿಸಲಾಗಿದೆ:

1. ಏಕಸ್ವಾಮ್ಯ
2. ದ್ವಿಜನಸ್ವಾಮ್ಯ
3. ಕೆಲಜನ ಸ್ವಾಮ್ಯ
4. ಸ್ವಾಮ್ಯಯುತ ಪೈಪೋಟಿ ಮಾರುಕಟ್ಟೆ

*ಮಾರುಕಟ್ಟೆ ವಿಧಗಳು*




ಮಾರುಕಟ್ಟೆ ವಿಧವನ್ನುಎರಡು ವಿಭಾಗ ಮಾಡಲಾಗಿದೆ

a. ಪರಿಪೂರ್ಣ ಪೈಪೋಟಿ
b. ಅಪರಿಪೂರ್ಣ ಪೈಪೋಟಿ

ಅಪರಿಪೂರ್ಣ ಪೈಪೋಟಿ 4 ವಿಭಾಗ ಮಾಡಲಾಗಿದೆ

1. ಏಕಸಾಮ್ಯ
2. ಸ್ವಾಮ್ಯಯುತ ಪೈಪೋಟಿ
3. ಕೆಲಜನ ಸಾಮ್ಯ
4. ದ್ವಿಜನಸ್ವಾಮ್ಯ

ಈ ಮಾರುಕಟ್ಟೆ ವಿಧಗಳನ್ನು ಸಂಕ್ಷಿಪ್ತವಾಗಿ ಚರ್ಚಿಸೋಣ.

## ಪರಿಪೂರ್ಣ ಪೈಪೋಟಿ ಮಾರುಕಟ್ಟೆ:

**ಅರ್ಥ:** ಪರಿಪೂರ್ಣ ಪೈಪೋಟಿ ಮಾರುಕಟ್ಟೆ ಎಂಬುದು 'ಅಧಿಕ ಸಂಖ್ಯೆಯ ಮಾರುವವರು ಮತ್ತು ಕೊಳ್ಳುವವರು ಏಕರೂಪವಾದ ಸರಕನ್ನು ಒಂದೇ ಬೆಲೆಗೆ ಮಾರುವ ಮತ್ತು ಕೊಳ್ಳುವ ಚಟುವಟಿಕೆಯಲ್ಲಿ ತೂಡಗಿದ್ದು, ಮಾರುಕಟ್ಟೆಯ ಸಂಪೂರ್ಣ ಮಾಹಿತಿಯಲ್ಲದೇ, ಮುಕ್ತ ಪ್ರವೇಶ ಮತ್ತು ನಿರ್ಗಮನ ಹೊಂದಿರುವ ವಿಧವಾಗಿದೆ'.

ಲಿಪ್ಸೆ ಅವರ ಪ್ರಕಾರ 'ಪರಿಪೂರ್ಣ ಪೈಪೋಟಿ ಮಾರುಕಟ್ಟೆಯಲ್ಲಿ ಎಲ್ಲಾ ಮಾರಾಟಗಾರರು ಬೆಲೆ ಸ್ವೀಕರಿಸುವ ಅಂಗಗಳಾಗಿದ್ದು, ಮಾರುಕಟ್ಟೆ ಪ್ರವೇಶಕ್ಕೆ ಮತ್ತು ನಿರ್ಗಮನಕ್ಕೆ ಸಂಪೂರ್ಣ ಸ್ವಾತಂತ್ರ್ಯ ಹೊಂದಿರುವವರಾಗಿದ್ದಾರೆ".

### *ಪರಿಪೂರ್ಣ ಪೈಪೋಟಿ ಮಾರುಕಟ್ಟೆಯ ಲಕ್ಷಣಗಳು:*

ಪರಿಪೂರ್ಣ ಪೈಪೋಟಿ ಮಾರುಕಟ್ಟೆಯ ಪ್ರಮುಖ ಲಕ್ಷಣಗಳೆಂದರೆ:

1. **ಅಧಿಕ ಸಂಖ್ಯೆಯ ಮಾರುವವರು ಮತ್ತು ಕೊಳ್ಳುವವರು:** ಪರಿಪೂರ್ಣ ಪೈಪೋಟಿ ಮಾರುಕಟ್ಟೆಯಲ್ಲಿ ಸರಕನ್ನು ಮಾರುವವರು ಮತ್ತು ಕೊಳ್ಳುವವರು ದೊಡ್ಡ ಸಂಖ್ಯೆಯಲ್ಲಿದ್ದು, ಒಬ್ಬನೇ ಮಾರಾಟಗಾರ ಮತ್ತು ಕೊಳ್ಳುವವರ ಒಂದು ಅತ್ಯಂತ ಚಿಕ್ಕ ಅಥವಾ ನಗಣ್ಯ ಅಂಗವಾಗಿರುತ್ತಾರೆ. ಯಾವುದೇ ಗ್ರಾಹಕ ಅಥವಾ ಮಾರಾಟಗಾರ ತನ್ನ ವೈಯಕ್ತಿಕ ಶಕ್ತಿಯಿಂದ ಬೆಲೆಯಲ್ಲಿ ಬದಲಾವಣೆ ತರಲು ಸಾಧ್ಯವಿಲ್ಲ. ಮಾರುಕಟ್ಟೆಯಲ್ಲಿ ನಿರ್ಧರಿತವಾಗಿರುವ ಬೆಲೆಗೆ ಮಾತ್ರ ಅವರು ವ್ಯವಹರಿಸಬಲ್ಲವರಾಗಿರುತ್ತಾರೆ. ಅಂದರೆ ಬೆಲೆಯನ್ನು ಒಟ್ಟಾರೆ ಮಾರುಕಟ್ಟೆ ಶಕ್ತಿಗಳು ನಿರ್ಧರಿಸುತ್ತಿದ್ದು ಮತ್ತು ಮಾರಾಟಗಾರರು ಮತ್ತು ಗ್ರಾಹಕರು ಕೇವಲ ಬೆಲೆ ತೆಗೆದುಕೊಳ್ಳುವ ಅಂಗಗಳಾಗಿರುತ್ತಾರೆ.
2. **ಏಕರೂಪದ ವಸ್ತು:** ಪರಿಪೂರ್ಣ ಪೈಪೋಟಿ ಮಾರುಕಟ್ಟೆಯಲ್ಲಿ ಉತ್ಪಾದಕರು ಏಕರೂಪದ ವಸ್ತುಗಳನ್ನು ಅಂದರೆ ಎಲ್ಲಾ ದೃಷ್ಟಿಕೋನದಿಂದಲೂ ಒಂದೇ ರೀತಿಯಾಗಿರುವ ಸರಕುಗಳನ್ನು ಉತ್ಪಾದಿಸುತ್ತಿದ್ದು, ಗ್ರಾಹಕನು ಯಾವುದೇ

ಮಾರಾಟಗಾರನ ಸರಕಿನ ಬಗ್ಗೆ ವಿಶೇಷ ಒಲವು ಹೊಂದಿರುವುದಿಲ್ಲ. ಹೀಗಾಗಿ ಮಾರಾಟಗಾರರು ಗ್ರಾಹಕರಿಗೆ ಬೇರೆ ಬೇರೆ ಬೆಲೆ ವಿಧಿಸುವ ಅವಕಾಶವಿರುವುದಿಲ್ಲ. ಅಂದರೆ ಪರಿಪೂರ್ಣ ಪೈಪೋಟಿ ಮಾರುಕಟ್ಟೆಯಲ್ಲಿ ಒಂದು ಸರಕಿಗೆ ಒಂದೇ ಬೆಲೆ ಇರುತ್ತದೆ.

3. **ಮುಕ್ತ ಪ್ರವೇಶ ಮತ್ತು ನಿರ್ಗಮನ:** ಹೊಸ ಘಟಕಗಳು ಮಾರುಕಟ್ಟೆಯನ್ನು ಪ್ರವೇಶಿಸಲು ಮತ್ತು ಮಾರುಕಟ್ಟೆಯಿಂದ ನಿರ್ಗಮಿಸಲು ಯಾವುದೇ ನಿರ್ಬಂಧಗಳಿರುವುದಿಲ್ಲ. ಒಟ್ಟಾರೆ ಉದ್ಯಮದಲ್ಲಿ ಯಾವಾಗ ಅಧಿಕ ಲಾಭ ಲಭ್ಯವಿರುವುದೋ ಆಗ ಹೊಸ ಘಟಕಗಳು ಮಾರುಕಟ್ಟೆಗೆ ಪ್ರವೇಶಿಸಬಹುದು, ಆದರೆ ನಷ್ಟದ ಸಮಯದಲ್ಲಿ ಕೆಲ ಘಟಕಗಳು ನಿರ್ಗಮಿಸಬಹುದು. ಈ ಮುಕ್ತ ಪ್ರವೇಶ-ನಿರ್ಗಮನದ ಅವಕಾಶವೂ ಸಹ, ಬೆಲೆಯಲ್ಲಿ ಬಹಳ ಏರು ಪೇರು ಆಗದಂತೆ ತಡೆಯುತ್ತದೆ.
4. **ಪರಿಪೂರ್ಣ ಜ್ಞಾನ:** ಮಾರುಕಟ್ಟೆಯ ಸನ್ನಿವೇಶದ ಬಗ್ಗೆ ಗ್ರಾಹಕರು ಮತ್ತು ಮಾರಾಟಗಾರರಿಗೆ ಸಂಪೂರ್ಣ ಜ್ಞಾನವಿರುತ್ತದೆಂಬ ಊಹೆ ಮಾಡಲಾಗಿದೆ. ಸರಕುಗಳ ಸಂಖ್ಯೆ ಮತ್ತು ವಿಧಗಳ ಮಾಹಿತಿ, ಅವುಗಳ ಮಾರಾಟಗಾರರು, ಭವಿಷ್ಯದ ಸಂಭವನೀಯ ಬೆಲೆಗಳು ಮತ್ತು ಪ್ರಮಾಣಗಳು ಎಲ್ಲಾ ಗ್ರಾಹಕರು ಮತ್ತು ಮಾರಾಟಗಾರರಿಗೆ ತಿಳಿದಿರುತ್ತದೆ. ಈ ರೀತಿಯ ಪರಿಪೂರ್ಣ ಜ್ಞಾನವು ಮಾರಾಟಗಾರರು ತಮ್ಮ ಸರಕನ್ನು ಮತ್ತು ಕೊಳ್ಳುವವರು ಅಸ್ತಿತ್ವದಲ್ಲಿರುವ ಮಾರುಕಟ್ಟೆ ಬೆಲೆಯಲ್ಲೇ ವ್ಯವಹರಿಸುವರು.

5. **ಉತ್ಪಾದನಾಂಗಗಳ ಪರಿಪೂರ್ಣ ಚಲನಶೀಲತೆ:** ಉತ್ಪಾದನಾಂಗಗಳಾದ ಭೂಮಿ, ಶ್ರಮ, ಬಂಡವಾಳ ಮತ್ತು ಸಂಘಟನೆಗಳು ಇವುಗಳು ಮಾರುಕಟ್ಟೆಗೆ ಹಾಗೂ ಮಾರುಕಟ್ಟೆಯಿಂದ ಹೊರಗಡೆಗೆ ಯಾವುದೇ ನಿರ್ಬಂಧವಿಲ್ಲದೇ ಚಲಿಸುತ್ತವೆ.
6. **ಏಕರೂಪದ ಬೆಲೆ:** ಸರಕಿನ ಏಕರೂಪತೆ ಮತ್ತು ಮಾರುಕಟ್ಟೆಯ ಸಂಪೂರ್ಣ ಮಾಹಿತಿಯಿಂದಾಗಿ ಮಾರುಕಟ್ಟೆಯಲ್ಲಿ ಒಂದು ಸರಕಿಗೆ ಒಂದೇ ಬೆಲೆ ಅಸ್ತಿತ್ವದಲ್ಲಿರುತ್ತದೆ. ಯಾವುದೇ ಒಬ್ಬ ಮಾರಾಟಗಾರ ಅಥವಾ ಕೊಳ್ಳುವವನಿಗೆ ಅದನ್ನು ಪ್ರಭಾವಿಸುವ ಶಕ್ತಿ ಇರದಿರುವ ಕಾರಣವಾಗಿ, ಎಲ್ಲರೂ ಅದೇ ಬೆಲೆಯನ್ನು ಒಪ್ಪಿಕೊಳ್ಳಲೇಬೇಕು. ಈ ಬೆಲೆಯು ಒಟ್ಟಾರೆ ಮಾರುಕಟ್ಟೆ ಬೇಡಿಕೆ ಮತ್ತು ಪೂರೈಕೆಗಳಿಂದ ನಿರ್ಧಾರವಾಗುತ್ತದೆ.

7. **ಸಾರಿಗೆ ವೆಚ್ಚ ಅಸ್ತಿತ್ವದಲ್ಲಿರುವುದಿಲ್ಲ:** ಪರಿಪೂರ್ಣ ಪೈಪೋಟಿ ಮಾರುಕಟ್ಟೆಯಲ್ಲಿ ಸಾರಿಗೆ ವೆಚ್ಚ ಇರುವುದಿಲ್ಲವೆಂಬ ಊಹೆ ಮಾಡಲಾಗಿದೆ. ಸಾರಿಗೆ ವೆಚ್ಚವನ್ನು ಸರಕಿನ ಬೆಲೆಯಲ್ಲಿ ಸೇರ್ಪಡೆಗೊಳಿಸಿದರೆ, ಸರಕಿನ ಪೂರೈಕೆಯ ಪ್ರದೇಶವನ್ನು ಆಧರಿಸಿ ವಿವಿಧ ಬೆಲೆಗಳು ಅಸ್ತಿತ್ವದಲ್ಲಿರಬೇಕಾಗುವುದರಿಂದ ಈ ಊಹೆಯನ್ನು ಮಾಡಲಾಗಿದೆ.

### *ಅಪರಿಪೂರ್ಣ ಪೈಪೋಟಿ ಮಾರುಕಟ್ಟೆ:*

ವಾಸ್ತವ ಪ್ರಪಂಚದಲ್ಲಿ ಪರಿಪೂರ್ಣ ಪೈಪೋಟಿಯ ಒಂದು ಅಥವಾ ಹಲವು ನಿಯಮಗಳ ಉಲ್ಲಂಘನೆಯಾಗುವುದರಿಂದ ಪರಿಪೂರ್ಣ ಪೈಪೋಟಿ ಮಾರುಕಟ್ಟೆಯ ಸಂರಚನೆಯನ್ನು ಕಾಣುವುದು ಕಷ್ಟಸಾಧ್ಯವಾಗಿದೆ. ಮುಖ್ಯವಾಗಿ ಮಾರಾಟಗಾರರು ತಾವು ಮಾರಾಟಮಾಡುತ್ತಿರುವ ಸರಕಿನ ಬೆಲೆಯ ಮೇಲೆ ನಿಯಂತ್ರಣ ಹೊಂದಿರುತ್ತಾರೆ ಮತ್ತು ತಮ್ಮ ಸರಕುಗಳನ್ನು ಭಿನ್ನ ಎಂದು ತೋರಿಸಲು ತುಂಬಾ ಶ್ರಮ ಪಡುತ್ತಾರೆ. ಮೇಲಾಗಿ ಮಾರುಕಟ್ಟೆಯ ಕುರಿತಾದ ಮಾಹಿತಿಯು ಸಂಪೂರ್ಣವಾಗಿ ಲಭ್ಯವಿರುವುದು ತುಂಬಾ ಅಪರೂಪ. ಇಂಥ ವಾಸ್ತವ ಜಗತ್ತಿಗೆ ಹತ್ತಿರವಿರುವ ಮಾರುಕಟ್ಟೆಗಳನ್ನು ಅಪರಿಪೂರ್ಣ ಪೈಪೋಟಿ ಮಾರುಕಟ್ಟೆ ಎಂದು ಕರೆಯುತ್ತೇವೆ. ಈ ಮಾರುಕಟ್ಟೆ ಸಂರಚನೆಯನ್ನು ಮಾರಾಟಗಾರರ ಸಂಖ್ಯೆಯ ಆಧಾರದಲ್ಲಿ ವರ್ಗೀಕರಿಸಲಾಗಿದೆ. ಅವುಗಳೆಂದರೆ, ಏಕಸ್ವಾಮ್ಯ (ಒಬ್ಬ ಮಾರಾಟಗಾರ), ದ್ವಿಜನಸ್ವಾಮ್ಯ (ಇಬ್ಬರು ಮಾರಾಟಗಾರರು), ಕೆಲಜನ ಸ್ವಾಮ್ಯ (ಕೆಲವು ಮಾರಾಟಗಾರರು) ಮತ್ತು ಸ್ವಾಮ್ಯಯುತ ಮಾರುಕಟ್ಟೆ(ಹಲವು ಮಾರಾಟಗಾರರು). ಈ ಮಾರುಕಟ್ಟೆ ವಿಧಗಳ ಲಕ್ಷಣಗಳನ್ನು ಚರ್ಚಿಸೋಣ.

## ಏಕಸ್ವಾಮ್ಯ ಮಾರುಕಟ್ಟೆ:

**ಅರ್ಥ:** ಏಕಸ್ವಾಮ್ಯವು ಅಪರಿಪೂರ್ಣ ಪೈಪೋಟಿ ಮಾರುಕಟ್ಟೆಯ ಮೂಲರೂಪವಾಗಿದೆ. ಆಂಗ್ಲ ಭಾಷೆಯಲ್ಲಿ ಇದನ್ನು ಮೊನೋಪೊಲಿ ಎಂದು ಕರೆಯುತ್ತದೆ. ಈ ಪದವನ್ನು ಗ್ರೀಕ್ ಭಾಷೆಯಿಂದ ಪಡೆಯಲಾಗಿದ್ದು 'ಮೋನೋ' ಎಂದರೆ 'ಏಕ' ಮತ್ತು 'ಪೊಲಿ' ಎಂದರೆ ಮಾರಾಟಗಾರ ಎಂಬ ಅರ್ಥವಿದೆ. ಆದ್ದರಿಂದ ಏಕಸ್ವಾಮ್ಯ ಎಂದರೆ ಒಬ್ಬನೇ ಮಾರಾಟಗಾರನಿರುವ ಮಾರುಕಟ್ಟೆಯಾಗಿದೆ. ಏಕಸ್ವಾಮ್ಯದ ವಿಶೇಷ ಲಕ್ಷಣವೆಂದರೆ ಯಾವುದೇ ಬದಲಿ ವಸ್ತುಗಳು ಇರದೇ ಇರುವುದರಿಂದ ಹೊಸ ಉದ್ಯಮಗಳ ಪ್ರವೇಶವನ್ನು ನಿರ್ಬಂಧಿಸಲಾಗುವುದು. ಹಾಗೆಂದರೆ ಇತರೆ ಉದ್ಯಮಗಳು ಅದೇ ರೀತಿಯ ಸರಕನ್ನು ಉತ್ಪಾದಿಸುವುದಿಲ್ಲ. ಸ್ವಾಭಾವಿಕವಾಗಿ ಏಕಸ್ವಾಮ್ಯ ಉತ್ಪಾದಕನು ಬೆಲೆ ನಿರ್ಧಾರಕನಾಗಿದ್ದು ತನ್ನ ಗರಿಷ್ಠ ಅನುಕೂಲಕ್ಕಾಗಿ ಬೆಲೆಯನ್ನು ನಿರ್ಧರಿಸುವನಾಗಿದ್ದಾನೆ. ಏಕಸ್ವಾಮ್ಯ ಮಾರಾಟಗಾರನ ಅಂತಿಮ ಗುರಿಯು ಗರಿಷ್ಠ ಪ್ರಮಾಣದ ಲಾಭಗಳಿಸುವುದೇ ಆಗಿದೆ.

**ಏಕಸ್ವಾಮ್ಯ ಮಾರುಕಟ್ಟೆಯ ಲಕ್ಷಣಗಳು:**

ಏಕಸ್ವಾಮ್ಯ ಮಾರುಕಟ್ಟೆಯ ಅಸ್ತಿತ್ವಕ್ಕೆ ಅಗತ್ಯವಿರುವ ನಿಯಮಗಳೆಂದರೆ:

1. ಒಬ್ಬನೇ ಉತ್ಪಾದಕ ಅಥವಾ ಮಾರಾಟಗಾರ
2. ಸರಕಿಗೆ ಯಾವುದೇ ಬದಲಿ ಸರಕುಗಳು ಇರದಿರುವುದು
3. ಘಟಕದ ಪ್ರವೇಶ ಮತ್ತು ನಿರ್ಗಮನಕ್ಕೆ ಇರುವ ಕಠಿಣ ಅಡೆತಡೆಗಳು.

ಅವುಗಳನ್ನು ಸಂಕ್ಷಿಪ್ತವಾಗಿ ವಿವರಿಸೋಣ.

1. **ಒಬ್ಬನೇ ಮಾರಾಟಗಾರ:** ಈ ಮಾರುಕಟ್ಟೆಯಲ್ಲಿ ಒಬ್ಬನೇ ಮಾರಾಟಗಾರನಿರುವನು. ಏಕಸ್ವಾಮ್ಯವು ಒಬ್ಬ ವ್ಯಕ್ತಿ, ಕೆಲವು ವ್ಯಕ್ತಿಗಳು ಅಥವಾ ಕೂಡುಬಂಡವಾಳ ಸಂಸ್ಥೆಯ ರೂಪದಲ್ಲಿರಬಹುದು.
2. **ಬದಲಿ ವಸ್ತುಗಳಿರುವುದಿಲ್ಲ:** ಈ ಮಾರುಕಟ್ಟೆಯಲ್ಲಿ ಇತರೆ ಯಾವ ಉತ್ಪಾದಕನೂ ಏಕಸ್ವಾಮ್ಯ ಘಟಕವು ಉತ್ಪಾದಿಸುವ ಸರಕನ್ನ ಇಲ್ಲವೇ ಅದಕ್ಕೆ ಬದಲಾಗಿ ಬಳಸುವ ಸರಕನ್ನು ಉತ್ಪಾದಿಸುವುದಿಲ್ಲ. ಅದು ಒಂದು ಅನನ್ಯ ಸರಕಾಗಿರುತ್ತದೆ.
3. **ಘಟಕ ಮತ್ತು ಉದ್ಯಮದ ನಡುವೆ ವ್ಯತ್ಯಾಸವಿಲ್ಲ:** ಈ ಮಾರುಕಟ್ಟೆಯಲ್ಲಿ ಸರಕನ್ನು ಉತ್ಪಾದಿಸುವ ಏಕೈಕ ಘಟಕ ಇರುವುದರಿಂದ ಅದೇ ಉದ್ಯಮ ಕೂಡ ಆಗಿದೆ.
4. **ಬೆಲೆ ತಾರತಮ್ಯ:** ಏಕಸ್ವಾಮ್ಯವು ತನ್ನ ಎಲ್ಲಾ ಗ್ರಾಹಕರಿಗೆ ಏಕರೂಪದ ಬೆಲೆ ನಿರ್ಧರಿಸಿದರೆ ಅದನ್ನು ಏಕರೂಪದ ಬೆಲೆ ಎಂತಲೂ, ವಿವಿಧ ಗ್ರಾಹಕರಿಗೆ ವಿಭಿನ್ನ ಬೆಲೆಯನ್ನು ನಿರ್ಧರಿಸಿದರೆ ಅದನ್ನು ಬೆಲೆ ತಾರತಮ್ಯ ಎಂತಲೂ ಕರೆಯುವರು. ಗರಿಷ್ಠ ಲಾಭವನ್ನು ಪಡೆಯುವ ಉದ್ದೇಶದಿಂದ ಈ ರೀತಿಯಾದ ಬೆಲೆ ತಾರತಮ್ಯವನ್ನು ಆಚರಿಸಲಾಗುತ್ತದೆ.
5. **ಉತ್ಪಾದನೆಯ ಮೇಲೆ ಸಂಪೂರ್ಣ ನಿಯಂತ್ರಣ:** ಏಕಸ್ವಾಮ್ಯದಲ್ಲಿ ಉತ್ಪಾದಕನು ತನ್ನ ಸರಕಿನ ಉತ್ಪಾದನೆ ಹಾಗೂ ಪೂರೈಕೆಯ ಮೇಲೆ ಸಂಪೂರ್ಣ ನಿಯಂತ್ರಣ ಹೊಂದಿರುತ್ತಾನೆ.
6. **ಬೆಲೆ ನಿರ್ಧಾರಕ:** ತಾನು ಉತ್ಪಾದಿಸುವ ಸರಕಿನ ಸಂಪೂರ್ಣ ನಿಯಂತ್ರಣ ಹೊಂದಿರುವ ಒಬ್ಬ ಏಕಸ್ವಾಮ್ಯ ಮಾರಾಟಗಾರನು ಬೆಲೆ ನಿರ್ಧರಿಸುವ ಅಧಿಕಾರವನ್ನು ಹೊಂದಿರುತ್ತಾನೆ. ಪರಿಪೂರ್ಣ ಪೈಪೋಟಿ ಮಾರುಕಟ್ಟೆಯಲ್ಲಿರುವಂತೆ ಅವನು ಕೇವಲ ಬೆಲೆ ಸ್ವೀಕರಿಸುವವನಲ್ಲ.
7. **ಲಾಭದ ಗರಿಷ್ಠತೆ:** ಈ ಮಾರುಕಟ್ಟೆಯಲ್ಲಿ ಉತ್ಪಾದಕನ ಪ್ರಮುಖ ಉದ್ದೇಶವು ಗರಿಷ್ಠ ಪ್ರಮಾಣದ ಲಾಭಗಳಿಸುವುದೇ ಆಗಿದೆ.

## ದ್ವಿಜನಸ್ವಾಮ್ಯ ಮಾರುಕಟ್ಟೆ:

**ಅರ್ಥ:**

ದ್ವಿಜನಸ್ವಾಮ್ಯದಲ್ಲಿ ಕೇವಲ ಇಬ್ಬರು ಉತ್ಪಾದಕರು/ ಮಾರಾಟಗಾರರು ಇರುವ ಮಾರುಕಟ್ಟೆಯಾಗಿದೆ. ಈ ಇಬ್ಬರೂ ಮಾರಾಟಗಾರರು ಆ ಸರಕಿಗಿರುವ ಒಟ್ಟು ಪೂರೈಕೆಯನ್ನು ನಿಯಂತ್ರಿಸುತ್ತಾರೆ. ದ್ವಿಜನಸ್ವಾಮ್ಯ ಮಾರುಕಟ್ಟೆಗೆ ಕೆಲವೇ ಉದಾಹರಣೆಗಳು ಲಭ್ಯವಿದ್ದು ಪ್ರಮುಖವಾದದ್ದೆಂದರೆ ದೊಡ್ಡ ಗಾತ್ರದ ವಾಯುನೌಕೆಗಳ ಮಾರುಕಟ್ಟೆ. 1990ರ ದಶಕದಿಂದೀಚೆಗೆ ಈ ವಾಯುನೌಕೆಗಳ ಮಾರುಕಟ್ಟೆಯು ಇಬ್ಬರು ಪ್ರತಿಸ್ಪರ್ಧಿಗಳಾದ ಏರ್ಬಸ್ ಮತ್ತು ಬೋಯಿಂಗ್‌ನ ಪ್ರಭುತ್ವಕ್ಕೆ ಒಳಪಟ್ಟಿದೆ. ಇವೆರಡೂ ವಾಯುನೌಕೆಗಳ ಒಬ್ಬರಿಗೊಬ್ಬರು

ಪ್ರತಿಸ್ಪರ್ಧೆ ನೀಡುತ್ತಾ ಒಟ್ಟು ಪೂರೈಕೆಯನ್ನು ನಿಯಂತ್ರಿಸುತ್ತವೆ. ಇದು ದ್ವಿಜನ ಸ್ವಾಮ್ಯದ ಸನ್ನಿವೇಶವಾಗಿದೆ.

**ದ್ವಿಜನಸ್ವಾಮ್ಯ ಮಾರುಕಟ್ಟೆಯ ಲಕ್ಷಣಗಳು:**

ದ್ವಿಜನಸ್ವಾಮ್ಯ ಮಾರುಕಟ್ಟೆಯ ಪ್ರಮುಖ ಲಕ್ಷಣಗಳೆಂದರೆ:

1. **ಇಬ್ಬರು ಮಾರಾಟಗಾರರು:** ದ್ವಿಜನಸ್ವಾಮ್ಯದಲ್ಲಿ ಇಬ್ಬರು ಮಾರಾಟಗಾರರಿರುತ್ತಾರೆ.

2. **ಏಕರೂಪದ ಸರಕುಗಳು:** ಎರಡು ಉದ್ಯಮಗಳು ಏಕರೂಪದ ಸರಕನ್ನು ಉತ್ಪಾದಿಸುವವು.

3. **ಘಟಕಗಳ ಸ್ವತಂತ್ರ ನಿರ್ಧಾರ ತೆಗೆದುಕೊಳ್ಳುವಿಕೆ:** ಸ್ವತಂತ್ರವಾಗಿ ನಿರ್ಧಾರ ತೆಗೆದುಕೊಳ್ಳಲು

   ಇಬ್ಬರೂ ಮಾರಾಟಗಾರರು ಸಂಪೂರ್ಣವಾಗಿ ಸ್ವತಂತ್ರರಾಗಿರುತ್ತಾರೆ. ಇಬ್ಬರದೂ ಗರಿಷ್ಠ ಲಾಭ ಗಳಿಸುವ ಉದ್ದೇಶ ಇದ್ದರೂ ಅವರಿಬ್ಬರ ನಡುವೆ ಯಾವುದೇ ಒಪ್ಪಂದ/ ಹೊಂದಾಣಿಕೆಗಳು ಇರುವುದಿಲ್ಲ.

4. **ಒಂದು ಘಟಕ ತೆಗೆದುಕೊಳ್ಳುವ ನಿರ್ಧಾರವು ಇನ್ನೊಂದು ಘಟಕದ ನಿರ್ಧಾರಗಳ ಮೇಲೆ ಪ್ರಭಾವ ಬೀರುತ್ತದೆ:** ದ್ವಿಜನಸ್ವಾಮ್ಯದಲ್ಲಿ ಒಂದು ಘಟಕ ವಿಧಿಸುವ ಬೆಲೆ ಮತ್ತು ಉತ್ಪಾದನೆಯಲ್ಲಿನ ಬದಲಾವಣೆಯು ಮತ್ತೊಂದು ಉದ್ಯಮದ ಮಾರಾಟದ ಮೇಲೆ ಪರಿಣಾಮ ಬೀರುತ್ತದೆ.

5. **ಬದಲಿ ಸರಕುಗಳು ಲಭ್ಯವಿರುವುದಿಲ್ಲ:** ಏಕಸ್ವಾಮ್ಯ ಮಾರುಕಟ್ಟೆಯಲ್ಲಿಯಂತೆಯೇ ದ್ವಿಜನಸ್ವಾಮ್ಯ ಮಾರುಕಟ್ಟೆಯಲ್ಲಿಯೂ ಸಹ ಬೇರೆ ಘಟಕಗಳು ಅಂಥದೇ ಸರಕು ಅಥವಾ ಸಮೀಪದ ಸರಕನ್ನು ಉತ್ಪಾದಿಸುವುದಿಲ್ಲ.

## ಕೆಲಜನಸ್ವಾಮ್ಯ ಮಾರುಕಟ್ಟೆ

**ಅರ್ಥ:** ಕೆಲಜನಸ್ವಾಮ್ಯ ಮಾರುಕಟ್ಟೆಯು ಅತ್ಯಂತ ಚಾಲ್ತಿಯಲ್ಲಿರುವ ಅಥವಾ ಪ್ರಚಲಿತದಲ್ಲಿರುವ ಮಾರುಕಟ್ಟೆ ವಿಧವಾಗಿದೆ. ಕೆಲಜನಸ್ವಾಮ್ಯವನ್ನು ಆಂಗ್ಲ ಭಾಷೆಯಲ್ಲಿ ಆಲಿಗೋಪೋಲಿ ಎಂದು ಕರೆಯುತ್ತಾರೆ. ‘ಆಲಿಗೊ’ ಎಂದರೆ ಕೆಲವು ಮತ್ತು ‘ಪೊಲಿ’ ಎಂದರೆ ಮಾರಾಟಗಾರ ಎಂಬ ಅರ್ಥವಿದೆ. ಆದ್ದರಿಂದ ಕೆಲಜನಸ್ವಾಮ್ಯ ಮಾರುಕಟ್ಟೆಯಲ್ಲಿ ಕೆಲವು ಘಟಕಗಳು ಏಕರೂಪದ ಅಥವಾ ಸ್ವಲ್ಪ ಭಿನ್ನವಾದ ಸರಕುಗಳನ್ನು ಉತ್ಪಾದಿಸಿ ಮಾರಾಟ ಮಾಡುತ್ತವೆ.

ಒಂದು ಮಾರುಕಟ್ಟೆಯಲ್ಲಿ ಕೆಲವೇ ಘಟಕಗಳು/ ಮಾರಾಟಗಾರರು ಉತ್ಪಾದಿಸುವ ಸನ್ನಿವೇಶ ಇರುವ ಮಾರುಕಟ್ಟೆಯನ್ನು ಕೆಲಜನಸ್ವಾಮ್ಯ ಮಾರುಕಟ್ಟೆ ಎನ್ನುವರು. ಉದಾಹರಣೆಗೆ

ಮೋಟಾರು ವಾಹನಗಳ ಉತ್ಪಾದಕರನ್ನು ಈ ಗುಂಪಿಗೆ ಸೇರಿಬಹುದಾಗಿದೆ.

**ಕೆಲಜನಸ್ವಾಮ್ಯ ಮಾರುಕಟ್ಟೆಯ ಲಕ್ಷಣಗಳು:**

ಕೆಲಜನಸ್ವಾಮ್ಯ ಮಾರುಕಟ್ಟೆಯ ಪ್ರಮುಖ ಲಕ್ಷಣಗಳೆಂದರೆ:

1. **ಕೆಲವೇ ಮಾರಾಟಗಾರರು:** ಕೆಲಜನಸ್ವಾಮ್ಯ ಮಾರುಕಟ್ಟೆಯ ಲಕ್ಷಣವೆಂದರೆ ಕೆಲವೇ ಮಾರಾಟಗಾರರು ಅಥವಾ ಘಟಕಗಳನ್ನು ಹೊಂದಿರುವುದಾಗಿದೆ. ಪ್ರತಿ ಘಟಕವು ಒಂದು ಸರಕಿನ ಒಟ್ಟು ಉತ್ಪಾದನೆಯಲ್ಲಿ ಗಣನೀಯ ಪಾಲನ್ನು ಹೊಂದಿರುತ್ತದೆ. ಯಾವುದೇ ಒಂದು ಘಟಕದ ನಿರ್ಣಯಗಳು ಒಟ್ಟು ಮಾರುಕಟ್ಟೆ ಸ್ಥಿತಿಯ ಮೇಲೆ ಗಮನಾರ್ಹ ಪರಿಣಾಮ ಬೀರುತ್ತದೆ. ಈ ಘಟಕಗಳು ತಮ್ಮಲ್ಲೇ ಪರಸ್ಪರ ಸ್ಪರ್ಧೆ ಒಡ್ಡುತ್ತಾ ಹೆಚ್ಚಿನ ಮಾರುಕಟ್ಟೆ ಪಾಲು ಪಡೆಯಲು ಪ್ರಯತ್ನಿಸುತ್ತವೆ.
2. **ಘಟಕಗಳ ಪರಸ್ಪರಾವಲಂಬನೆ:** ಕೆಲಜನಸ್ವಾಮ್ಯದಲ್ಲಿನ ಘಟಕಗಳು ನಿರ್ಧಾರ ಕೈಗೊಳ್ಳುವಿಕೆಯಲ್ಲಿ ಪರಸ್ಪರ ಅವಲಂಬನೆ ಹೊಂದಿವೆ. ಪ್ರತಿಸ್ಪರ್ಧಿಗಳು ಕಡಿಮೆ ಸಂಖ್ಯೆಯಲ್ಲಿರುವುದರಿಂದ ಬೆಲೆ ಮತ್ತು ಸರಕಿನಲ್ಲಿನ ಯಾವುದೇ ಬದಲಾವಣೆಯು ಇತರೆ ಪ್ರತಿಸ್ಪರ್ಧಿ ಘಟಕಗಳ ವ್ಯವಹಾರದ ಮೇಲೆ ನೇರ ಪರಿಣಾಮ ಬೀರುತ್ತದೆ. ಆಗ ಆ ಘಟಕಗಳು ಪ್ರತೀಕಾರದ ಕ್ರಮವಾಗಿ ತಮ್ಮ ಬೆಲೆ ಮತ್ತು ಉತ್ಪನ್ನದಲ್ಲಿ ಬದಲಾವಣೆ ಮಾಡುತ್ತವೆ. ಮಾರಾಟಗಾರನ ಪ್ರತಿ ನಡೆಯು, ಇತರೆ ಮಾರಾಟಗಾರರ ಪ್ರತಿ ನಡೆಗೆ ಕಾರಣವಾಗುತ್ತದೆ.

3. **ಜಾಹಿರಾತು ಮತ್ತು ಮಾರಾಟ ವೆಚ್ಚದ ಮಹತ್ವ:** ಕೆಲಜನಸ್ವಾಮ್ಯದಲ್ಲಿನ ಪರಸ್ಪರಾವಲಂಬನೆಯು ನೇರ ಪರಿಣಾಮವೆಂದರೆ ಮಾರುಕಟ್ಟೆಯ ಹೆಚ್ಚಿನ ಪಾಲನ್ನು ಪಡೆಯಲು ಘಟಕಗಳು ಹಲವು ಆಕ್ರಮಣಶೀಲ ಮತ್ತು ರಕ್ಷಣಾತ್ಮಕ ಕ್ರಮಗಳನ್ನು ಕೈಗೊಳ್ಳುತ್ತವೆ. ಆದ್ದರಿಂದ ಕೆಲಜನಸ್ವಾಮ್ಯ ಘಟಕಗಳು ಜಾಹೀರಾತು ಮತ್ತು ಇತರ ಮಾರಾಟ ವೆಚ್ಚಗಳನ್ನು ಅಧಿಕಗೊಳಿಸುತ್ತಾರೆ.
4. **ಒಡಂಬಡಿಕೆಯ ನಡವಳಿಕೆ:** ಪರಸ್ಪರಾವಲಂಬನೆಯ ಕಾರಣದಿಂದಾಗಿ ಘಟಕಗಳು ಲಾಭ ಗರಿಷ್ಠೀಕರಣಗೊಳಿಸುವುದಕ್ಕೆ ಒಪ್ಪಂದಗಳನ್ನು ಒಡಂಬಡಿಕೆಗಳನ್ನು ಮಾಡಿಕೊಳ್ಳುತ್ತವೆ. ಎಲ್ಲ ಘಟಕಗಳು ಸೇರಿ ಎಷ್ಟನ್ನು ಉತ್ಪಾದಿಸಬೇಕು, ಬೆಲೆ ಎಷ್ಟು ವಿಧಿಸಬೇಕು, ಮಾರಾಟ ತಂತ್ರಗಳಾವುವು ಮುಂತಾದ ನಿರ್ಧಾರಗಳನ್ನು ಒಟ್ಟಾಗಿ ಕೈಗೊಳ್ಳುತ್ತವೆ.

ಪ್ರೊ. ಸ್ಟಿಗ್ಲರ್ ಅವರ ಅಭಿಪ್ರಾಯದಂತೆ ಕೆಲಜನಸ್ವಾಮ್ಯದ ಸನ್ನಿವೇಶವೆಂದರೆ 'ಉದ್ಯಮಗಳು ತಮ್ಮ ಮಾರುಕಟ್ಟೆ ನೀತಿಯನ್ನು ಇತರೆ ಸಮೀಪದ ಪ್ರತಿಸ್ಪರ್ಧಿಗಳ ನಿರೀಕ್ಷಿತ ವರ್ತನೆಯನ್ನು ಆಧರಿಸಿ ನಿರ್ಧರಿಸುವುದಾಗಿದೆ'.

**ಸ್ವಾಮ್ಯಯುತ ಪೈಪೋಟಿ ಮಾರುಕಟ್ಟೆ:**

**ಅರ್ಥ:** ಸ್ವಾಮ್ಯಯುತ ಪೈಪೋಟಿ ಮಾರುಕಟ್ಟೆಯೆಂದರೆ 'ಬಹಳ ಜನ ಉತ್ಪಾದಕ/ ಮಾರಾಟಗಾರರು ಸಮೀಪದ ಬದಲಿ ವಸ್ತುಗಳನ್ನು ಉತ್ಪಾದನೆ/ ಮಾರಾಟ ಮಾಡುವ

ಮಾರುಕಟ್ಟೆ ಸನ್ನಿವೇಶವಾಗಿದೆ'.

ಪ್ರೊ. ಇ. ಎಚ್. ಚೇಂಬರ್ಲಿನ್‌ರವರು ಈ ಮಾರುಕಟ್ಟೆ ಕುರಿತು 1933 ರಲ್ಲಿ ಪ್ರಕಟವಾದ 'ದಿ ಥಿಯರಿ ಆಫ್ ಮೊನೋಪಲಿಸ್ಟಿಕ್ ಕಾಂಪಿಟೇಷನ್' ಎಂಬ ಪುಸ್ತಕದಲ್ಲಿ ಪ್ರತಿಪಾದಿಸಿದ್ದಾರೆ.

**ಸ್ವಾಮ್ಯಯುತ ಪೈಪೋಟಿ ಮಾರುಕಟ್ಟೆಯ ಲಕ್ಷಣಗಳು:**

ಸ್ವಾಮ್ಯಯುತ ಪೈಪೋಟಿ ಮಾರುಕಟ್ಟೆಯ ಪ್ರಮುಖ ಲಕ್ಷಣಗಳೆಂದರೆ

1. **ಅಧಿಕ ಸಂಖ್ಯೆಯ ಮಾರುವವರು ಮತ್ತು ಕೊಳ್ಳುವವರು:** ಸ್ವಾಮ್ಯಯುತ ಪೈಪೋಟಿ ಮಾರುಕಟ್ಟೆಯಲ್ಲಿ ಅಧಿಕ ಸಂಖ್ಯೆಯ ಮಾರಾಟಗಾರರು ಮತ್ತು ಕೊಳ್ಳುವವರು ಇರುತ್ತಾರೆ.
2. **ವಸ್ತು ವೈವಿಧತೆ:** ವಸ್ತು ವೈವಿಧತೆಯು ಸ್ವಾಮ್ಯಯುತ ಪೈಪೋಟಿ ಮಾರುಕಟ್ಟೆಯ ವೈಶಿಷ್ಟತೆಯಾಗಿದೆ. ಇದನ್ನು ವ್ಯಾಪಾರದ ಮುದ್ರೆ, ಹಕ್ಕುಸ್ವಾಮ್ಯ, ಕಚ್ಚಾ ಸರಕಿನ ಗುಣಮಟ್ಟ, ನೊಂದಣಿ ಜಾಹೀರಾತು, ಮಾರಾಟ ತಂತ್ರಗಾರಿಕೆಗಳ ಮುಖಾಂತರ ಕಾರ್ಯರೂಪಕ್ಕೆ ತರುವರು.

3. **ಉದ್ಯಮಗಳ ಮುಕ್ತ ಪ್ರವೇಶ ಮತ್ತು ನಿರ್ಗಮನ:** ಸ್ವಾಮ್ಯಯುತ ಪೈಪೋಟಿ ಮಾರುಕಟ್ಟೆಯಲ್ಲಿ ಉದ್ಯಮಗಳು ಮಾರುಕಟ್ಟೆಯನ್ನು ಮುಕ್ತವಾಗಿ ಪ್ರವೇಶಿಸಬಹುದು ಹಾಗೂ ಮಾರುಕಟ್ಟೆಯಿಂದ ನಿರ್ಗಮಿಸಬಹುದಾಗಿದೆ.
4. **ಬೆಲೆ ನಿರ್ಧಾರಕರು:** ಸ್ವಾಮ್ಯಯುತ ಪೈಪೋಟಿ ಮಾರುಕಟ್ಟೆಯಲ್ಲಿನ ಉದ್ಯಮ ಘಟಕಗಳು ತಮ್ಮ ಸರಕುಗಳ ಬೆಲೆಗಳನ್ನು ನಿರ್ಧರಿಸಲು ಶಕ್ತವಾಗಿವೆ.

**ಈ ಕೆಳಗಿನ ಕೋಷ್ಟಕದಲ್ಲಿ ಪರಿಪೂರ್ಣ ಮತ್ತು ಅಪರಿಪೂರ್ಣ ಪೈಪೋಟಿ ಮಾರುಕಟ್ಟೆ ಸಂರಚನೆಯ ಲಕ್ಷಣಗಳ ಸಾರಾಂಶವನ್ನು ನೀಡಲಾಗಿದೆ.**

| **ಲಕ್ಷಣಗಳು** | **ಪರಿಪೂರ್ಣ ಪೈಪೋಟಿ** | **ಅಪರಿಪೂರ್ಣ ಪೈಪೋಟಿ** |
|---|---|---|
| ಉದ್ಯಮಗಳ ಸಂಖ್ಯೆ | ಅಧಿಕ | ಜಾಸ್ತಿ ಆದರೆ ತೀರ ಹೆಚ್ಚಲ್ಲ |
| ಸರಕಿನ ಸ್ವರೂಪ | ಏಕರೂಪ | ವಸ್ತು ವೈವಿಧ್ಯತೆ |
| ಏಕಸ್ವಾಮ್ಯದ ಅಧಿಕಾರದ ಮಟ್ಟ (ಮಾರುಕಟ್ಟೆ ಶಕ್ತಿ) | ಶೂನ್ಯ | ಮಿತವಾಗಿದೆ |
| ಮಾರುಕಟ್ಟೆ ಜ್ಞಾನ | ಪರಿಪೂರ್ಣ | ಅಪರಿಪೂರ್ಣ |
| ಉದ್ಯಮದ ಬೆಲೆ ನೀತಿ | ಬೆಲೆ ಸ್ವೀಕರಿಸುವರು | ಬೆಲೆ ನಿರ್ಧಾರಕರು |
| ಬೇಡಿಕೆ ಸ್ಥಿತಿಸ್ಥಾಪಕತ್ವ | ಪರಿಪೂರ್ಣ ಸ್ಥಿತಿಸ್ಥಾಪಕತ್ವ | ಕಡಿಮೆ ಸ್ಥಿತಿಸ್ಥಾಪಕತ್ವ |

| | | |
|---|---|---|
| ಉದ್ಯಮಗಳ ಪ್ರವೇಶ | ಮುಕ್ತ | ಮಾರುಕಟ್ಟೆ ಸಂರಚನೆಯನ್ನು ಅವಲಂಬಿಸಿದೆ |

## ಅಭ್ಯಾಸ

**I. ಈ ಕೆಳಗಿನ ಪ್ರಶ್ನೆಗಳಿಗೆ ನಾಲ್ಕು ಪರ್ಯಾಯ ಉತ್ತರಗಳನ್ನು ಕೊಡಲಾಗಿದೆ ಅವುಗಳಲ್ಲಿ ಸೂಕ್ತವಾದ ಉತ್ತರವನ್ನು ಆರಿಸಿ ಬರೆಯಿರಿ.**

1. ಮಾರಾಟಗಾರರು ಮತ್ತು ಗ್ರಾಹಕರು ಮಾರುಕಟ್ಟೆ ಸ್ಥಿತಿಯ ಬಗ್ಗೆ ಪರಿಪೂರ್ಣ ಜ್ಞಾನ ಹೊಂದಿರುವ ಮಾರುಕಟ್ಟೆ ಸನ್ನಿವೇಶವೆಂದರೆ _______

   ಅ) ದ್ವಿಜನ ಸ್ವಾಮ್ಯ
   ಆ) ಏಕಸ್ವಾಮ್ಯ
   ಇ) ಪರಿಪೂರ್ಣ ಪೈಪೋಟಿ
   ಈ) ಕೆಲಜನ ಸ್ವಾಮ್ಯ

2. ಅಪರಿಪೂರ್ಣ ಪೈಪೋಟಿ ಮಾರುಕಟ್ಟೆಯನ್ನು _______ ಆಗಿ ವರ್ಗೀಕರಿಸಬಹುದು.

   ಅ) ಏಕಸ್ವಾಮ್ಯ
   ಆ) ಸ್ವಾಮ್ಯಯುತ
   ಇ) ಕೆಲಜನಸ್ವಾಮ್ಯ
   ಈ) ಮೇಲಿನ ಎಲ್ಲವೂ

3. ಪ್ರೊ. ಇ. ಎಚ್. ಚೇಂಬರ್ಲಿನ್‌ರವರು ತಮ್ಮ ಪುಸ್ತಕದ ಮೂಲಕ ಜನಪ್ರಿಯಗೊಳಿಸಿದ ಮಾರುಕಟ್ಟೆಯು _______ ಮಾರುಕಟ್ಟೆ

   ಅ) ಸ್ವಾಮ್ಯಯುತ ಪೈಪೋಟಿ
   ಆ) ಏಕಸ್ವಾಮ್ಯ
   ಇ) ದ್ವಿಜನಸ್ವಾಮ್ಯ
   ಈ) ಕೆಲಜನಸ್ವಾಮ್ಯ

4. ಕೆಲಜನಸ್ವಾಮ್ಯ ಮಾರುಕಟ್ಟೆಯು _______ ಮಾರಾಟಗಾರರನ್ನು ಹೊಂದಿದೆ.

   ಅ) ಒಬ್ಬ
   ಆ) ಕೆಲವು
   ಇ) ಹಲವು
   ಈ) ಮೇಲಿನ ಯಾವುದೂ ಅಲ್ಲ

5. ಸರಕುಗಳನ್ನು ವ್ಯಾಪಾರ ಚಿಹ್ನೆ, ಪೇಟೆಂಟ್ ಮೂಲಕ ವ್ಯತ್ಯಾಸಿಸುವುದು _______ ಮಾರುಕಟ್ಟೆಯಾಗಿದೆ.

   ಅ) ಏಕಸ್ವಾಮ್ಯ
   ಆ) ಸ್ವಾಮ್ಯಯುತ ಪೈಪೋಟಿ
   ಇ) ಕೆಲಜನಸ್ವಾಮ್ಯ
   ಈ) ದ್ವಿಜನ ಸ್ವಾಮ್ಯ

## II. ಈ ಕೆಳಗಿನ ವಾಕ್ಯಗಳಲ್ಲಿ ಖಾಲಿ ಬಿಟ್ಟ ಸ್ಥಳಗಳನ್ನು ತುಂಬಿರಿ.

1. ಮಾರುಕಟ್ಟೆ ಸಂರಚನೆಯು ಮಾರುಕಟ್ಟೆಯ _______ ಲಕ್ಷಣಗಳನ್ನು ಸೂಚಿಸುತ್ತದೆ.
2. ಪರಿಪೂರ್ಣ ಪೈಪೋಟಿ ಮಾರುಕಟ್ಟೆಯಲ್ಲಿ ಉದ್ಯಮಗಳು _______ ಸರಕುಗಳನ್ನು ಉತ್ಪಾದಿಸುತ್ತವೆ.
3. ಏಕಸ್ವಾಮ್ಯ ಮಾರುಕಟ್ಟೆಯು _______ ಉದ್ಯಮಗಳನ್ನು ಹೊಂದಿರುತ್ತದೆ.
4. ಆಟೋಮೊಬೈಲ್ ತಯಾರಿಕಾ ಘಟಕವು _______ ಮಾರುಕಟ್ಟೆಗೆ ಉದಾಹರಣೆಯಾಗಿದೆ.
5. ಸ್ವಾಮ್ಯಯುತ ಪೈಪೋಟಿ ಮಾರುಕಟ್ಟೆಯಲ್ಲಿ ಉದ್ಯಮಗಳು _______ ಆಗಿರುತ್ತಾದೆ.

## III. ಈ ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.

1. ಯಾವ ಮೂಲ ಅಂಶಗಳ ಆಧಾರದ ಮೇಲೆ ಮಾರುಕಟ್ಟೆ ವಿಧಗಳನ್ನು ವರ್ಗೀಕರಿಸಲಾಗಿದೆ?
2. ಅಪರಿಪೂರ್ಣ ಪೈಪೋಟಿ ಮಾರುಕಟ್ಟೆಯ ವಿಧಗಳನ್ನು ಹೆಸರಿಸಿ.
3. 'ಪೊಲಿ' ಪದದ ಅರ್ಥ ಏನು?
4. ಪರಿಪೂರ್ಣ ಪೈಪೋಟಿ ಮಾರುಕಟ್ಟೆಯಲ್ಲಿ ಸರಕುಗಳ ಬೆಲೆಯನ್ನು ಹೇಗೆ ನಿರ್ಧರಿಸಲಾಗುತ್ತದೆ?
5. 'ಆಲಿಗೋ' ಪದದ ಅರ್ಥ ಏನು?

## IV. ಈ ಕೆಳಗಿನ ಪ್ರಶ್ನೆಗಳಿಗೆ ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿ.

1. ಮಾರುಕಟ್ಟೆ ಸಂರಚನೆಯ ಅರ್ಥವೇನು?
2. ಮಾರುಕಟ್ಟೆ ಸಂರಚನೆಯ ಪ್ರಮುಖ ವಿಧಗಳನ್ನು ಹೆಸರಿಸಿ.
3. ಪರಿಪೂರ್ಣ ಪೈಪೋಟಿ ಮಾರುಕಟ್ಟೆಯ ಅರ್ಥ ಬರೆಯಿರಿ.

4. ಏಕಸ್ವಾಮ್ಯ ಮಾರುಕಟ್ಟೆಯು ಅಸ್ತಿತ್ವದಲ್ಲಿರಲು ಅಗತ್ಯವಾದ ಪ್ರಮುಖ ಲಕ್ಷಣಗಳನ್ನು ಹೆಸರಿಸಿ.

5. ದ್ವಿಜನಸ್ವಾಮ್ಯ ಮಾರುಕಟ್ಟೆಗೆ ಉದಾಹರಣೆ ಕೊಡಿ.

**V. ಈ ಕೆಳಗಿನ ಪ್ರಶ್ನೆಗಳಿಗೆ ಎಂಟು ವಾಕ್ಯಗಳಲ್ಲಿ ಉತ್ತರಿಸಿ.**

1. ವಿವಿಧ ಪ್ರಕಾರದ ಮಾರುಕಟ್ಟೆಗಳನ್ನು ಸಂಕ್ಷಿಪ್ತವಾಗಿ ವಿವರಿಸಿ.
2. ಪರಿಪೂರ್ಣ ಪೈಪೋಟಿ ಮಾರುಕಟ್ಟೆಯ ಲಕ್ಷಣಗಳನ್ನು ಸಂಕ್ಷಿಪ್ತವಾಗಿ ಚರ್ಚಿಸಿ.
3. ಕೆಲಜನಸ್ವಾಮ್ಯ ಮಾರುಕಟ್ಟೆಯ ಮೇಲೆ ಕಿರು ಟಿಪ್ಪಣಿ ಬರೆಯಿರಿ.
4. ಅಪರಿಪೂರ್ಣ ಪೈಪೋಟಿ ಮಾರುಕಟ್ಟೆಯ ವಿವಿಧ ಲಕ್ಷಣಗಳನ್ನು ಚರ್ಚಿಸಿ.
5. ಪರಿಪೂರ್ಣ ಪೈಪೋಟಿ ಮತ್ತು ಅಪರಿಪೂರ್ಣ ಪೈಪೋಟಿ ಮಾರುಕಟ್ಟೆಯ ನಡುವಿನ ವ್ಯತ್ಯಾಸಗಳನ್ನು ಬರೆಯಿರಿ.

**ನಿಯೋಜಿತ ಕಾರ್ಯ:**

ನೀವು ದಿನನಿತ್ಯ ಬಳಸುವ ಸರಕುಗಳನ್ನು ಪಟ್ಟಿಯನ್ನು ಮಾಡಿ ಮತ್ತು ಅವುಗಳನ್ನು ವಿವಿಧ ಮಾರುಕಟ್ಟೆ ಸಂರಚನೆಗೆ ಅನುಗುಣವಾಗಿ ವರ್ಗೀಕರಿಸಿ.

ನಿಮ್ಮ ಜಿಲ್ಲೆಯಲ್ಲಿ ಅಸ್ತಿತ್ವದಲ್ಲಿರುವ ವಿವಿಧ ಬಗೆಯ ಮಾರುಕಟ್ಟೆಗಳ ಮಾಹಿತಿಯನ್ನು ಸಂಗ್ರಹಿಸಿ ಬರೆಯಿರಿ.

## ಅಧ್ಯಾಯ-3: ಹಂಚಿಕೆ

“ಸಮುದಾಯವು ಉತ್ಪಾದಿಸಿದ ಸಂಪತ್ತಿನ ಪಾಲನ್ನು, ಉತ್ಪಾದನೆಯಲ್ಲಿ ಸಕ್ರಿಯವಾಗಿ ನಿರತರಾಗಿರುವ ಅದರ ಏಜೆಂಟರು ಇಲ್ಲವೆ ಉತ್ಪಾದನಾಂಗಗಳ ಮಾಲೀಕರ ನಡುವೆ ಹಂಚಿಕೆಯಾಗಿದೆ” ಚಾಪ್‌ಮನ್

### ಪೀಠಿಕೆ:

ನಾವು ಮಾರುಕಟ್ಟೆಯಲ್ಲಿ ಕೊಂಡುಕೊಳ್ಳುವ ಸರಕುಗಳನ್ನು ಹಲವು ಉತ್ಪಾದನಾಂಗಗಳ ಸಹಾಯದಿಂದ ಉತ್ಪಾದಿಸಲಾಗುತ್ತದೆ. ಈ ಆದಾನ ಅಥವಾ ಉತ್ಪಾದನಾಂಗಗಳು ಬೇರೆ ಬೇರೆ ಜನರ ಮಾಲೀಕತ್ವದಲ್ಲಿ ಇರುತ್ತವೆ ಮತ್ತು ಅವುಗಳ ಸೇವೆಯನ್ನು ಉತ್ಪಾದನೆಗಾಗಿ ಬಳಸಿಕೊಂಡಿದ್ದಕ್ಕಾಗಿ ಅವುಗಳಿಗೆ ಸೂಕ್ತ ಪ್ರತಿಫಲವನ್ನು ನೀಡಬೇಕಾಗುತ್ತದೆ. ಉತ್ಪಾದಕರು ಪ್ರತಿ ಉತ್ಪಾದನಾಂಗಗಳ ಬೆಲೆ ಮತ್ತು ಒಟ್ಟು ಉತ್ಪಾದನೆಯ ಮೌಲ್ಯದಲ್ಲಿ ಅವುಗಳ ಪಾಲನ್ನು ನಿರ್ಧರಿಸುವಲ್ಲಿ ಸವಾಲನ್ನು ಎದುರಿಸುತ್ತಾರೆ. ಹಾಗಾದರೆ ಹಂಚಿಕೆ ಎಂದರೇನು? ವಿವಿಧ ಉತ್ಪಾದನಾಂಗಗಳ ಬೆಲೆಯನ್ನು ಹೇಗೆ ನಿರ್ಧರಿಸಲಾಗುತ್ತದೆ? ಉತ್ಪಾದನಾಂಗಗಳ ಬೆಲೆಯನ್ನು ನಿರ್ಧರಿಸುವಲ್ಲಿನ ಮಹತ್ವವೇನು? ವಿವಿಧ ಉತ್ಪಾದನಾಂಗಗಳ ಸೇವೆಯ ಮೌಲ್ಯಮಾಪನ ಹೇಗೆ ಮಾಡಲಾಗುತ್ತದೆ ಮತ್ತು ಅವುಗಳಿಗೆ ಪ್ರತಿಫಲವನ್ನು ಹೇಗೆ ಹಂಚಿಕೆ ಮಾಡಲಾಗುತ್ತದೆ? ಈ ಅಧ್ಯಾಯದ ಅಧ್ಯಯನವು ಈ ಪ್ರಶ್ನೆಗಳಿಗೆ ಉತ್ತರಗಳನ್ನು ಹುಡುಕುವುದು ಮತ್ತು ಹಂಚಿಕೆಯ ಇತರೆ ಆಯಾಮಗಳನ್ನು ತಿಳಿಯಲು ನೆರವಾಗುವುದು.

### ಹಂಚಿಕೆಯ ಅರ್ಥ:

ಹಂಚಿಕೆಯು ಅರ್ಥಶಾಸ್ತ್ರದ ಪ್ರಮುಖ ಪರಿಕಲ್ಪನೆಯಾಗಿದೆ. ಉತ್ಪಾದನಾಂಗಗಳಾದ ಭೂಮಿ, ಶ್ರಮ, ಬಂಡವಾಳ ಮತ್ತು ಸಂಘಟನೆಯ ಸಮನ್ವಯದಿಂದ ವಿವಿಧ ಸರಕು ಮತ್ತು ಸೇವೆಗಳನ್ನು ಉತ್ಪಾದಿಸಲಾಗುವುದು. ಈ ಉತ್ಪಾದನಾಂಗಗಳ ಸೇವೆಯನ್ನು ಪಡೆದುದಕ್ಕಾಗಿ ಅವುಗಳಿಗೆ ಉತ್ಪಾದಕನು ಪ್ರತಿಫಲವನ್ನು ನೀಡಬೇಕಾಗುತ್ತದೆ. ಹಂಚಿಕೆಯ ಪರಿಕಲ್ಪನೆಯು ಉತ್ಪಾದನಾಂಗಗಳ ಬೆಲೆಯು ಹೇಗೆ ನಿರ್ಧಾರಿತವಾಗುತ್ತದೆ ಎಂಬುದನ್ನು ಅರ್ಥಮಾಡಿಕೊಳ್ಳಲು ನೆರವಾಗುವುದು. ಇದು ಪರೋಕ್ಷವಾಗಿ ಉತ್ಪಾದನಾಂಗಗಳಿಗೆ ದೊರೆಯುವ ಆದಾಯದ ಹಂಚಿಕೆಯ ಸ್ವರೂಪವನ್ನು ತಿಳಿಸುತ್ತದೆ. ಇದು ಉತ್ಪಾದನಾಂಗಗಳ ಬೆಲೆ ನಿರ್ಧರಿಸುವಲ್ಲಿ ಪಾತ್ರ ವಹಿಸುವುದರಿಂದ ಇದನ್ನು ಉತ್ಪಾದನಾಂಗಗಳ ಬೆಲೆ ಎಂದು ಕರೆಯುವರು. ಪ್ರತಿಯೊಂದು ಉತ್ಪಾದನಾಂಗಕ್ಕೂ ತನ್ನದೇ ಬೆಲೆ ಅಥವಾ ಪ್ರತಿಫಲ ದೊರೆಯುವುದು. ಉದಾಹರಣೆಗೆ ಭೂಮಿಗೆ ಗೇಣಿ

ಪ್ರತಿಫಲವಾದರೆ, ಶ್ರಮಕ್ಕೆ ಕೂಲಿ, ಬಂಡವಾಳಕ್ಕೆ ಬಡ್ಡಿ ಹಾಗೂ ಸಂಘಟನಾಕಾರನಿಗೆ ಲಾಭವು ಪ್ರತಿಫಲವಾಗಿದೆ.

**ಹಂಚಿಕೆಯ ಪರಿಕಲ್ಪನೆ:**

ಹಂಚಿಕೆಯ ಪರಿಕಲ್ಪನೆಯ ಪ್ರಕಾರ ಉತ್ಪಾದನಾಂಗಗಳಿಗೆ ಅವುಗಳು ಒದಗಿಸಿರುವ ಸೇವೆಗಳಿಗೆ ಪ್ರತಿಫಲವನ್ನು ನೀಡಲಾಗುತ್ತದೆಯೇ ಹೊರತು ಇದು ಉತ್ಪಾದನಾಂಗಗಳಿಗೆ ನೀಡುವ ಬೆಲೆಯಲ್ಲ. ಹಾಗಾಗಿ, ಉತ್ಪಾದನಾಂಗಗಳಿಗೆ ಪ್ರತಿಫಲದ ಹಂಚಿಕೆಯು ಕಾರ್ಯಾನುಗುಣ ಹಂಚಿಕೆಯಾಗಿದೆ. ಉದಾಹರಣೆಗೆ

1. ಭೂಮಿಯ ಬಳಕೆಗಾಗಿ ಗೇಣಿಯನ್ನು ನೀಡಲಾಗುವುದೇ ಹೊರತು ಹೆಕ್ಟೇರ್ ಭೂಮಿಗಾಗಿ ಅಲ್ಲ.
2. ಕಾರ್ಮಿಕರ ಸೇವೆಗೆ ಕೂಲಿಯನ್ನು ನೀಡಲಾಗುವುದೇ ಹೊರತು ಸ್ವತಃ ಕಾರ್ಮಿಕನಿಗಲ್ಲ.
3. ಬಂಡವಾಳದ ಬಳಕೆಗಾಗಿ ಬಡ್ಡಿಯನ್ನು ಪ್ರತಿಫಲವಾಗಿ ನೀಡುವರು.
4. ಸಂಘಟನಾಕಾರನ ಸೇವೆಗೆ ಲಾಭವನ್ನು ಪ್ರತಿಫಲವಾಗಿ ನೀಡಲಾಗುತ್ತದೆ.

## ಗೇಣಿ:

ಸಾಮಾನ್ಯ ಅರ್ಥದಲ್ಲಿ ಗೇಣಿಯೆಂದರೆ ಬಾಡಿಗೆದಾರನು ಇತರರಿಗೆ ಸಂಬಂಧಿಸಿದ ವಸ್ತುವನ್ನು ಬಳಸಿದ್ದಕ್ಕಾಗಿ (ಆಸ್ತಿ, ಭೂಮಿ, ಪೀಠೋಪಕರಣ, ಯಂತ್ರ ಅಥವಾ ಕಾರು ಇತ್ಯಾದಿ) ನಿಯಮಿತವಾಗಿ ನೀಡಬೇಕಾಗಿರುವ ಮೊತ್ತವಾಗಿದೆ. ಅರ್ಥಶಾಸ್ತ್ರದಲ್ಲಿ ಗೇಣಿಯನ್ನು ಸಂಕುಚಿತಾರ್ಥದಲ್ಲಿ ಬಳಸಲಾಗಿದೆ. ಗೇಣಿಯೆಂದರೆ ಭೂಮಿ ಮತ್ತು ಇತರ ನೈಸರ್ಗಿಕ ಸಂಪನ್ಮೂಲಗಳ ಸೇವೆಯ ಬಳಕೆಗೆ ದೊರಕುವ ಪ್ರತಿಫಲವಾಗಿದೆ.

ಅರ್ಥಶಾಸ್ತ್ರದಲ್ಲಿ ಗೇಣಿಗೆ ಸಂಬಂಧಿಸಿದಂತೆ ಎರಡು ಪ್ರಮುಖ ದೃಷ್ಟಿಕೋನಗಳಿವೆ. ಅವು

i. ಸಾಂಪ್ರದಾಯಿಕ ದೃಷ್ಟಿಕೋನ
ii. ಡೇವಿಡ್ ರಿಕಾರ್ಡೋರವರ ಗೇಣಿ ಸಿದ್ಧಾಂತ
iii. ಆಧುನಿಕ ದೃಷ್ಟಿಕೋನ
iv. ಆಧುನಿಕ ಗೇಣಿ ಸಿದ್ಧಾಂತ

**i) ಸಾಂಪ್ರಾದಾಯಿಕ ದೃಷ್ಟಿಕೋನ- ಡೇವಿಡ್ ರಿಕಾರ್ಡೋರವರ ಗೇಣಿ ಸಿದ್ಧಾಂತ:**

**ಡೇವಿಡ್‌ರಿಕಾರ್ಡೋ ರವರ ಪ್ರಕಾರ:** 'ಗೇಣಿಯೆಂದರೆ ಭೂಮಿಯ ಮೂಲ ಮತ್ತು ಅವಿನಾಶಿ ಗುಣಗಳನ್ನು ಬಳಸಿಕೊಂಡಿದ್ದಕ್ಕಾಗಿ ಅದರ ಒಡೆಯನಿಗೆ ನೀಡಬೇಕಾದ ಉತ್ಪನ್ನದ ಭಾಗವಾಗಿದೆ'. ಈ ಸಿದ್ಧಾಂತವು ಮಹತ್ವ ನೀಡಿರುವ ಅಂಶಗಳೆಂದರೆ:

1. ಭೂಮಿಯ ಪೂರೈಕೆಯು ಸ್ಥಿರವಾಗಿರುವುದರಿಂದ ಭೂಮಿಯ ಬಳಕೆಗೆ ಮಾತ್ರ ಗೇಣಿ ನೀಡಬೇಕಾಗುತ್ತದೆ.
2. ಗೇಣಿದಾರನು ಭೂಮಿಯ ನೈಸರ್ಗಿಕ ಮಣ್ಣು, ಫಲವತ್ತತೆ, ಖನಿಜಾಂಶ, ಇತ್ಯಾದಿ ನೈಸರ್ಗಿಕ ಅಂಶಗಳನ್ನು ಬಳಸಿಕೊಂಡಿದ್ದಕ್ಕಾಗಿ ಭೂ ಮಾಲೀಕನಿಗೆ ಗೇಣಿ ಪಾವತಿಸುವನು.
3. ಭೂಮಿಯ ಉತ್ಪಾದಕತೆಯು ಸ್ಥಳ ಮತ್ತು ಫಲವತ್ತತೆಯ ಆಧಾರದ ಮೇಲೆ ಭಿನ್ನವಾಗಿರುತ್ತದೆ.
4. ಉತ್ತಮ ಗುಣಮಟ್ಟದ ಭೂಮಿಯು ಇತರೆ ಭೂಮಿಗಿಂತ ಹೆಚ್ಚಿನ ಅನುಕೂಲತೆಗಳನ್ನು ಹೊಂದಿದ್ದು, ಅದಕ್ಕೆ ಹೆಚ್ಚಿನ ಗೇಣಿ ಲಭಿಸುತ್ತದೆ. ಈ ಗೇಣಿಯನ್ನು ವ್ಯತ್ಯಾಸಾತ್ಮಕ ಗೇಣಿ ಎನ್ನುವರು.

**ii) ಆಧುನಿಕ ದೃಷ್ಟಿಕೋನ- ಆಧುನಿಕ ಗೇಣಿ ಸಿದ್ಧಾಂತ:** ಆಧುನಿಕ ಗೇಣಿ ಸಿದ್ಧಾಂತವು ರಿಕಾರ್ಡೋರವರ ಗೇಣಿ ಸಿದ್ಧಾಂತದ ಸುಧಾರಿತ ರೂಪವಾಗಿದೆ. ಅರ್ಥಶಾಸ್ತ್ರಜ್ಞರಾದ ಮಾರ್ಷಲ್, ಶ್ರೀಮತಿ ಜೋನ್ ರಾಬಿನ್‌ಸನ್ ಮತ್ತು ಕೆನ್ನೆತ್ ಬೌಲ್ಡಿಂಗ್ ಅವರು ಆಧುನಿಕ ಗೇಣಿ ಸಿದ್ಧಾಂತಕ್ಕೆ ಕೊಡುಗೆ ನೀಡಿದ್ದಾರೆ. ಇದನ್ನು ಆಧುನಿಕ ಗೇಣೀ ಸಿದ್ಧಾಂತ ಎನ್ನುವರು.

ಈ ಸಿದ್ಧಾಂತದ ಪ್ರಕಾರ ಯಾವುದೇ ಉತ್ಪಾದನಾಂಗವನ್ನು ಅದು ಪ್ರಸ್ತುತ ಇರುವ ಬಳಕೆಯಲ್ಲೇ ಉಳಿಸಿಕೊಳ್ಳಲು ನೀಡಬೇಕಾದ ಕನಿಷ್ಠ ಮೊತ್ತಕ್ಕಿಂತ ಹೆಚ್ಚುವರಿಯಾಗಿ ನೀಡಿದ ಮೊತ್ತವೇ ಗೇಣಿಯಾಗಿದೆ. ಹಾಗಾಗಿ, ಗೇಣಿಯು ವಾಸ್ತವಿಕ ಗಳಿಕೆಯಲ್ಲಿ ವರ್ಗಾವಣೆ ಗಳಿಕೆಯನ್ನು ಕಳೆದುದಕ್ಕೆ ಸಮನಾಗಿದೆ.

ಗೇಣಿ = ವಾಸ್ತವ ಗಳಿಕೆ - ವರ್ಗಾವಣೆ ಗಳಿಕೆ

ಇಲ್ಲಿ ಉತ್ಪಾದನಾಂಗವು ತನ್ನ ಪ್ರಸಕ್ತ ಉದ್ಯೋಗದಲ್ಲಿ ಗಳಿಸಿದಂತಹ ಗಳಿಕೆಯು ವಾಸ್ತವ ಗಳಿಕೆಯಾಗಿದೆ. ಉತ್ಪಾದನಾಂಗವು ಇತರೆ ಬಳಕೆ ಅಥವಾ ಉದ್ಯೋಗಕ್ಕೆ ಹೋಗದಂತೆ ತಡೆಯಲು ನೀಡಲೇಬೇಕಾದ ಕನಿಷ್ಟ ಪಾವತಿಯನ್ನು ವರ್ಗಾವಣೆ ಗಳಿಕೆಯೆಂದು ಕರೆಯುತ್ತೇವೆ.

## ಕೂಲಿ:

ಕಾರ್ಮಿಕರಿಗೆ ಅವರ ಶ್ರಮದ ಬಳಕೆಗಾಗಿ ನೀಡಲಾಗುವ ಪ್ರತಿಫಲವೇ ಕೂಲಿಯಾಗಿದೆ. ಕೆಲಸಗಾರನು ಉತ್ಪಾದಕ ಸೇವೆಗಳನ್ನು ಬಳಸಿಕೊಂಡಿದ್ದಕ್ಕಾಗಿ ಪ್ರತಿಫಲವಾಗಿ ಮಾಲೀಕನು ನೀಡುವ ಪರಿಹಾರವೇ ಕೂಲಿಯಾಗಿದೆ. ಕೂಲಿಯು ಎಲ್ಲಾ ರೀತಿಯ

ಪಾವತಿಗಳನ್ನು (ಸಂಬಳ, ಬೋನಸ್, ಮತ್ತು ಇತರೆ ರೂಪಗಳನ್ನು) ಒಳಗೊಳ್ಳುವುದು. ಕಾರ್ಮಿಕನ ಬೌದ್ಧಿಕ ಮತ್ತು ದೈಹಿಕ ಕೌಶಲ್ಯಗಳನ್ನು ಬಳಸಿಕೊಂಡಿದ್ದಕ್ಕಾಗಿ ಕೂಲಿಯನ್ನು ನೀಡಲಾಗುವುದು. ಉದಾಹರಣೆಗೆ ಭತ್ತದ ಗದ್ದೆಯಲ್ಲಿ ಕೆಲಸ ನಿರ್ವಹಿಸಿದ ರೈತನಿಗೆ ಮತ್ತು ವೈದ್ಯರು ನಿರ್ವಹಿಸಿದ ಕೆಲಸಕ್ಕೆ ಕೂಲಿ ಅಥವಾ ಶುಲ್ಕವನ್ನು ನೀಡಬೇಕಾಗುತ್ತದೆ.

ಬೆನ್‌ಹ್ಯಾಂರವರ ಪ್ರಕಾರ 'ಉದ್ಯೋಗದಾತನ ಒಪ್ಪಂದದಂತೆ ಕಾರ್ಮಿಕನ ಸೇವೆಗೆ ಪ್ರತಿಫಲವಾಗಿ ಪಾವತಿಸಿದ ಒಟ್ಟು ಹಣದ ಮೊತ್ತವನ್ನು ಕೂಲಿ ಎನ್ನುವರು'.

**ಕೂಲಿಯ ವಿಧಗಳು:**

1. **ನಾಮಮಾತ್ರ ಕೂಲಿ:** ಬೆಲೆಯ ಬದಲಾವಣೆಯನ್ನು ಪರಿಗಣಿಸದೇ ಕಾರ್ಮಿಕರಿಗೆ ನೀಡಲಾಗುವ ಹಣರೂಪಿ ಕೂಲಿಯನ್ನು ನಾಮಮಾತ್ರ ಕೂಲಿ ಎನ್ನುವರು. ಉದಾಹರಣೆ ಗಂಟೆಯ ಕೂಲಿ, ದಿನಕೂಲಿ, ತಿಂಗಳ ಕೂಲಿಯಾಗಿ ನಿಶ್ಚಿತವಾಗಿ ನಿಗದಿಯಾಗಿದ್ದು, ಕಾರ್ಮಿಕರಿಗೆ ಪಾವತಿಸುವ ನಿರ್ದಿಷ್ಟ ಪಾವತಿಯಾಗಿದೆ.
2. **ನೈಜ ಕೂಲಿ:** ಹಣರೂಪಿ ಕೂಲಿಯನ್ನು ಏರಿಕೆಯಾಗುವ ಬೆಲೆಯೊಂದಿಗೆ ಹೊಂದಾಣಿಕೆ ಮಾಡಿದರೆ ಅದು ಕೂಲಿಯ ಹಣದಿಂದ ಕೊಳ್ಳಬಹುದಾದ ಸರಕು ಮತ್ತು ಸೇವೆಗಳ ನೈಜ ಮೊತ್ತವನ್ನು ಪ್ರತಿಬಿಂಬಿಸುತ್ತದೆ. ಹೀಗಾಗಿ, ನೈಜಕೂಲಿಯು ವ್ಯಕ್ತಿಗಳ ಜೀವನದ ಗುಣಮಟ್ಟವನ್ನು ಸೂಚಿಸುತ್ತದೆ.
3. **ಹಣರೂಪಿ ಕೂಲಿ:** ಕಾರ್ಮಿಕರು ನಿರ್ವಹಿಸಿದ ಕೆಲಸಕ್ಕೆ ಹಣದ ರೂಪದಲ್ಲಿ ಪಾವತಿಸುವ ಮೊತ್ತವನ್ನು ಹಣರೂಪಿ ಕೂಲಿ ಎನ್ನುವರು.
4. **ತುಂಡು ಕೂಲಿ:** ಕೂಲಿಯನ್ನು ಕೆಲಸ ನಿರ್ವಹಿಸಿದ ಘಟಕಗಳು ಅಥವಾ ಕೆಲಸದ ಭಾಗದ ಆಧಾರದ ಮೇಲೆ ನೀಡಿದರೆ ಅದನ್ನು ತುಂಡು ಕೂಲಿ ಎನ್ನುವರು. ಶಿಕ್ಷಕರಿಗೆ ಕೂಲಿ/ ಸಂಬಳವನ್ನು ಪಠ್ಯದ ಪಾಠಗಳ ಅಥವಾ ಅಧ್ಯಾಯಗಳ ಭೋದಿಸುವ ಆಧಾರದ ಮೇಲೆ ನೀಡುವುದನ್ನು ತುಂಡು ಕೂಲಿ ಎಂದು ಕರೆಯಬಹುದು.
5. **ಸಮಯದ ಕೂಲಿ:** ಕಾರ್ಮಿಕನು ಸರಕಿನ ಉತ್ಪಾದನೆಗಾಗಿ ಕೆಲಸದಲ್ಲಿ ತೊಡಗಿಸಿಕೊಂಡ ಸಮಯದ ಆಧಾರದ ಮೇಲೆ ನೀಡಿದ ಕೂಲಿಯನ್ನು ಸಮಯದ ಕೂಲಿ ಎಂದು ಕರೆಯಬಹುದು. ಉದಾಹರಣೆಗೆ ತಾತ್ಕಾಲಿಕ ಶಿಕ್ಷಕರಿಗೆ ಗಂಟೆಗಳ ಲೆಕ್ಕದಲ್ಲಿ ಕೂಲಿ ಪಾವತಿಸುವುದು ಸಮಯದ ಕೂಲಿಯಾಗಿದೆ.
6. **ಸರಕಿನ ರೂಪದ ಕೂಲಿ:** ಕಾರ್ಮಿಕರಿಗೆ ಕೂಲಿಯನ್ನು ಹಣದ ರೂಪದಲ್ಲಿ ನೀಡದೇ ಸರಕಿನ ರೂಪದಲ್ಲಿ ನೀಡುವುದನ್ನು ಸರಕಿನ ರೂಪದ ಕೂಲಿ ಎನ್ನುವರು. ಉದಾಹರಣೆಗೆ ಕೃಷಿ ಕಾರ್ಮಿಕರಿಗೆ ಹಣ ರೂಪದಲ್ಲಿ ಕೂಲಿಯನ್ನು ನೀಡದೇ ಧಾನ್ಯಗಳನ್ನು ಅಥವಾ ಇತರ ವಸ್ತುಗಳನ್ನು ನೀಡಿದರೆ ಅದನ್ನು ಸರಕಿನ ರೂಪದ ಕೂಲಿ ಎಂದು ಕರೆಯುತ್ತೇವೆ.

## ಬಡ್ಡಿ:

ಬಂಡವಾಳ ಅಥವಾ ಪಡೆದ ಸಾಲದ ಹಣಕ್ಕೆ ನೀಡಲಾಗುವ ಪ್ರತಿಫಲವನ್ನು ಬಡ್ಡಿ ಎನ್ನುವರು. ಮತ್ತೊಂದು ಅರ್ಥದಲ್ಲಿ ಹೇಳುವುದಾದರೆ, ಬಡ್ಡಿಯು ಬಂಡವಾಳವನ್ನು ಉತ್ಪಾದನಾ ಪ್ರಕ್ರಿಯೆಯಲ್ಲಿ ಬಳಸಿಕೊಂಡಿದ್ದಕ್ಕಾಗಿ ನೀಡುವ ಪ್ರತಿಫಲವಾಗಿದೆ. ಅಂದರೆ ಬಡ್ಡಿಯನ್ನು ಸಾಲ ನೀಡಲು ಬಳಸಲಾದ ಬಂಡವಾಳದ ಭಾಗಕ್ಕೆ ಮಾತ್ರ ಪಾವತಿಸಲಾಗುವುದೇ ಹೊರತ್ತು ಪೂರ್ಣ ಬಂಡವಾಳಕೆ ಅಲ್ಲ.

ಜೆ. ಎಂ. ಕೇನ್ಸ್ ಅವರ ಪ್ರಕಾರ: ‘ಜನರು ತಮ್ಮ ಸಂಪತ್ತನ್ನು ಹಣದ ರೂಪದಲ್ಲಿ ಹೊರತುಪಡಿಸಿ ಇತರೇ ರೂಪದಲ್ಲಿ ಹೊಂದುವಂತೆ ಪ್ರೇರೇಪಿಸಲು ನೀಡಲಾಗುವ ಪರಿಹಾರವೇ ಬಡ್ಡಿ’ಯಾಗಿದೆ.

ಬ್ಯಾಚ್ ಅವರ ಪ್ರಕಾರ: ’ಬಡ್ಡಿಯು ಹಣ ಅಥವಾ ಸಾಲದ ಬಳಕೆಗಾಗಿ ನೀಡಲಾಗುವ ಬೆಲೆಯಾಗಿದೆ’.

ಬಡ್ಡಿಯಲ್ಲಿ ಎರಡು ವಿಧಗಳಿವೆ. 1) ನಿವ್ವಳ ಬಡ್ಡಿ 2) ಒಟ್ಟು ಬಡ್ಡಿ

**1) ನಿವ್ವಳ ಬಡ್ಡಿ:** ನಿರ್ದಿಷ್ಟ ಅವಧಿಯಲ್ಲಿ ಹಣ ಅಥವಾ ಬಂಡವಾಳವನ್ನು ಬಳಸಿದ್ದಕ್ಕೆ ಮಾತ್ರ ಮಾಡಲಾಗುವ ಪಾವತಿಯಾಗಿದೆ. ಈ ಬಡ್ಡಿಯನ್ನು ಶುದ್ಧ ಬಡ್ಡಿ ಎಂದೂ ಕರೆಯುವರು.

**2) ಒಟ್ಟು ಬಡ್ಡಿ:** ಒಟ್ಟು ಬಡ್ಡಿಯು ಸಾಲಗಾರನು ಬಂಡವಾಳಗಾರನಿಗೆ ನೀಡುವ ಒಟ್ಟು ಪಾವತಿಯನ್ನು ಒಳಗೊಂಡಿರುತ್ತದೆ. ಇದು ನಿವ್ವಳ ಬಡ್ಡಿಯಲ್ಲದೇ ಗಂಡಾಂತರ ಎದುರಿಸಿದ್ದಕ್ಕೆ ಪ್ರತಿಫಲ, ನಿರ್ವಹಣೆ ಕಾರ್ಯಕ್ಕಾಗಿನ ಪ್ರತಿಫಲ ಮತ್ತು ಅನಾನುಕೂಲತೆಗಳನ್ನು ಎದುರಿಸಿದ್ದಕ್ಕೆ ನೀಡುವ ಪ್ರತಿಫಲ ಎಲ್ಲವನ್ನು ಒಳಗೊಂಡಿರುತ್ತದೆ.

ಒಟ್ಟು ಬಡ್ಡಿ = ನಿವ್ವಳ ಬಡ್ಡಿ + ನಿರ್ವಹಣೆಗಾಗಿ ಪ್ರತಿಫಲ + ಗಂಡಾಂತರ ಎದುರಿಸಿದ್ದಕ್ಕೆ

ಪ್ರತಿಫಲ + ಅನಾನುಕೂಲಕ್ಕೆ ಪ್ರತಿಫಲ/ ಪರಿಹಾರ

**ಒಟ್ಟು ಬಡ್ಡಿಯು ಒಳಗೊಂಡಿರುವ ಅಂಶಗಳನ್ನು ಈ ಕೆಳಗಿನಂತೆ ವಿವರಿಸಬಹುದು:**

1. ನಿವ್ವಳ ಬಡ್ಡಿ: ನಿರ್ದಿಷ್ಟ ಅವಧಿಯಲ್ಲಿ ಹಣದ ಬಂಡವಾಳವನ್ನು ಬಳಸಿದ್ದಕ್ಕೆ ಮಾಡಲಾಗುವ ಪಾವತಿಯಾಗಿದೆ.
2. ಗಂಡಾಂತರ ಎದುರಿಸಿದ್ದಕ್ಕೆ ಪ್ರತಿಫಲ: ಸಾಲದಾತನು ವ್ಯವಹಾರ ಮತ್ತು ವೈಯಕ್ತಿಕ ಗಂಡಾಂತರಗಳಿಂದಾಗಿ ತನ್ನ ಬಂಡವಾಳವನ್ನು ಕಳೆದುಕೊಳ್ಳುವ ಅಪಾಯವನ್ನು ಎದುರಿಸುತ್ತಿರುತ್ತಾನೆ.

    i. ವ್ಯಾಪಾರದಲ್ಲಿನ ಗಂಡಾಂತರವು ವ್ಯವಹಾರದಲ್ಲಿನ ಲಾಭದಲ್ಲಿನ ಅನಿಶ್ಚಿತತೆಯಿಂದ ಉಂಟಾಗುವುದು. ಇದರಿಂದ ಸಾಲಗಾರನು ಸರಿಯಾದ ಸಮಯಕ್ಕೆ ಸಾಲದ ಕಂತನ್ನು ಪಾವತಿಸದೇ ಇರಬಹುದು.

ii. ಸಾಲಗಾರನು ಅಪ್ರಾಮಾಣಿಕನಾಗಿದ್ದರೆ ವೈಯಕ್ತಿಕ ಗಂಡಾಂತರ ಸಂಭವಿಸಬಹುದು.

3. ನಿರ್ವಹಣೆಯ ಪ್ರತಿಫಲ: ಸಾಲದಾತನು ಸ್ವಲ್ಪ ಹಣವನ್ನು ಸಾಲದ ದಾಖಲೆಗಳ ನಿರ್ವಹಣೆಗೆ, ಸಾಮಗ್ರಿಗಳನ್ನು ಖರೀದಿಸಲು, ಕಾನೂನಿನ ಪರವಾನಗಿ ಪಡೆಯಲು, ಇತ್ಯಾದಿಗಳಿಗೆ ಬಳಸಬೇಕಿರುತ್ತದೆ. ಈ ಹೆಚ್ಚುವರಿ ಜವಾಬ್ದಾರಿಯನ್ನು ನಿರ್ವಹಿಸಿದ್ದಕ್ಕೆ ಸಾಲಗಾರನು ನೀಡಬೇಕಾದ ಪ್ರತಿಫಲವಾಗಿದೆ.
4. ಅನಾನುಕೂಲಕ್ಕೆ ಪ್ರತಿಫಲ: ಕೆಲವು ಬಾರಿ ಸಾಲದಾತನಿಗೆ ಬೇರೆಕಡೆ ಮರುಹೂಡಿಕೆ ಮಾಡಲು ಸಾಲದ ಹಣ ಬೇಕಾಗಬಹುದು. ಆಗ ಸಾಲ ಪಡೆದವನು ಸರಿಯಾದ ಸಮಯಕ್ಕೆ ಮರುಪಾವತಿಸದೇ ಇದ್ದಾಗ ಸಾಲದಾತನು ಅನಾನುಕೂಲತೆಯನ್ನು ಎದುರಿಸುತ್ತಾನೆ. ಹಾಗಾಗಿ, ಸಾಲದಾತನಿಗೆ ಹೆಚ್ಚುವರಿಯಾಗಿ ಪಾವತಿಸಬೇಕಾಗದ ಪ್ರತಿಫಲವಾಗಿದೆ.

## ಲಾಭ:

ಲಾಭವು ಸಂಘಟನಾಕಾರನಿಗೆ ದೊರೆಯುವ ಪ್ರತಿಫಲವಾಗಿದೆ. ಸಂಘಟನಾಕಾರನು ತನ್ನ ಸಾಮರ್ಥ್ಯವನ್ನು ಬಳಸಿ ಎಲ್ಲಾ ಉತ್ಪಾದನಾಂಗಗಳನ್ನು ಉತ್ಪಾದನಾ ಚಟುವಟಿಕೆಗಾಗಿ ಸಂಘಟಿಸುವನು. ಈ ಪ್ರಕ್ರಿಯೆಯಲ್ಲಿ ಹಲವು ಗಂಡಾಂತರ ಮತ್ತು ಅನಿಶ್ಚಿತತೆಗಳನ್ನು ಎದುರಿಸುವನು. ಆದ್ದರಿಂದ ಲಾಭವನ್ನು ಸಂಘಟನಾಕಾರನಿಗೆ ಗಂಡಾಂತರ ಮತ್ತು ಅನಿಶ್ಚಿತತೆಯನ್ನು ಎದುರಿಸಿ ಉತ್ಪಾದನಾ ಚಟುವಟಿಕೆ ಕೈಗೊಂಡಿದ್ದಕ್ಕೆ ಪ್ರತಿಫಲವಾಗಿ ನೀಡಲಾಗುತ್ತದೆ. ಲಾಭವನ್ನು ಶೇಷ ಆದಾಯವೆಂತಲೂ ಲೆಕ್ಕಾಚಾರ ಮಾಡಬಹುದು. ಅಂದರೆ ಒಟ್ಟು ಆದಾಯದಲ್ಲಿ ಇತರೆ ಎಲ್ಲಾ ಉತ್ಪಾದನಾಂಗಗಳಿಗೂ ಪ್ರತಿಫಲವನ್ನು ಹಂಚಿಕೆ ಮಾಡಿದ ನಂತರ ಉಳಿಯುವ ಶೇಷ ಮೊತ್ತವಾಗಿದೆ.

**ಲಾಭದ ವಿಧಗಳು:**

ಲಾಭದಲ್ಲಿ ಹಲವು ವಿಧಗಳಿವೆ. ಅವುಗಳಲ್ಲಿ ಪ್ರಮುಖವಾದವೆಂದರೆ 1) ಒಟ್ಟು ಲಾಭ 2) ನಿವ್ವಳ ಲಾಭ. ಇವುಗಳನ್ನು ಸಂಕ್ಷಿಪ್ತವಾಗಿ ತಿಳಿದುಕೊಳ್ಳೋಣ.

**ಒಟ್ಟು ಲಾಭ:** ಎಲ್ಲಾ ಉತ್ಪಾದನಾಂಗಗಳಿಗೆ ಪ್ರತಿಫಲವನ್ನು ಹಂಚಿದ ನಂತರ ಉಳಿಯುವ ಆದಾಯವನ್ನು ಒಟ್ಟು ಲಾಭವೆಂದು ಕರೆಯುತ್ತಾರೆ. ಹಾಗಾಗಿ ಒಟ್ಟು ಲಾಭವು ಒಳಗೊಳ್ಳುವ ಅಂಶಗಳೆಂದರೆ:

1. ಸಂಘಟನಾಕಾರನು ವ್ಯವಹಾರಕ್ಕಾಗಿ ಬಳಸಿದ ತನ್ನ ಸ್ವಂತ ಭೂಮಿಯ ಗೇಣಿ
2. ಸಂಘಟನಾಕಾರನು ಹೂಡಿದ ಸ್ವಂತ ಬಂಡವಾಳಕ್ಕೆ ಬಡ್ಡಿ

3. ಸಂಘಟನಾಕಾರನು ನಿರ್ವಹಣೆಯ ಕಾರ್ಯವನ್ನು ನಿರ್ವಹಿಸಿದ್ದಕ್ಕೆ ಕೂಲಿ
4. ಅನುಕೂಲಕರ ಮಾರುಕಟ್ಟೆ ಸನ್ನಿವೇಶಗಳಿಂದಾದ ಗಳಿಕೆ
5. ಹೊಸ ಆವಿಷ್ಕಾರಗಳಿಂದ ಗಳಿಸಿದ ಆದಾಯ
6. ಗಂಡಾಂತರ ಮತ್ತು ಅನಿಶ್ಚಿತತೆಗಳನ್ನು ಎದುರಿಸಿ/ ನಿವಾರಿಸಿ ಆದಾಯ ಗಳಿಸಿದ್ದಕ್ಕೆ ಪ್ರತಿಫಲ

**ನಿವ್ವಳ ಲಾಭ:** ಸಂಘಟನಾಕಾರನಿಗೆ ನಿವ್ವಳ ಲಾಭವು ಅನೇಕ ಕಾರ್ಯಗಳ ನಿರ್ವಹಣೆಗಾಗಿ ದೊರೆಯುತ್ತದೆ. ಅವುಗಳಲ್ಲಿ ಪ್ರಮುಖವಾಗಿ

1. ವಿವಿಧ ಉತ್ಪಾದನಾಂಗಗಳನ್ನು ಸಂಯೋಜಿಸಿದ್ದಕ್ಕಾಗಿ
2. ಅನಿಶ್ಚಿತತೆ ಮತ್ತು ಗಂಡಾಂತರವನ್ನು ಎದುರಿಸಿದ್ದಕ್ಕೆ ಮತ್ತು ಯಶಸ್ವಿಯಾಗಿ ನಿವಾರಿಸಿದ್ದಕ್ಕೆ
3. ಉತ್ಪಾದನೆ ಮತ್ತು ಮಾರುಕಟ್ಟೆ ಪ್ರಕ್ರಿಯೆಯಲ್ಲಿ ಹೊಸ ಆವಿಷ್ಕಾರವನ್ನು ಪರಿಚಯಿಸಿದ್ದಕ್ಕಾಗಿ

## ಅಭ್ಯಾಸ

### I. **ಈ ಕೆಳಗಿನ ಪ್ರಶ್ನೆಗಳಿಗೆ ನಾಲ್ಕು ಪರ್ಯಾಯ ಉತ್ತರಗಳನ್ನು ಕೊಡಲಾಗಿದೆ ಅವುಗಳಲ್ಲಿ ಸೂಕ್ತವಾದ ಉತ್ತರವನ್ನು ಆರಿಸಿ ಬರೆಯಿರಿ.**

1. ಉತ್ಪಾದನಾಂಗಗಳು ಒದಗಿಸಿದ ಸೇವೆಗಳ ಮೌಲ್ಯೀಕರಣವನ್ನು ________ ಎಂದು ಕರೆಯುತ್ತೇವೆ.

   ಅ) ಸಂಗ್ರಹ
   ಆ) ಹಂಚಿಕೆ
   ಇ) ಅಂದಾಜು
   ಈ) ಈ ಯಾವುದೂ ಅಲ್ಲ

2. ________ ಯ ಬಳಕೆಗೆ ಗೇಣಿ ನೀಡುತ್ತೇವೆ.

   ಅ) ಭೂಮಿ
   ಆ) ಬಂಡವಾಳ
   ಇ) ಶ್ರಮ
   ಈ) ಈ ಯಾವುದೂ ಅಲ್ಲ

3. ಕೆಲಸದ ನಿರ್ದಿಷ್ಟ ಘಟಕಗಳನ್ನು ನಿರ್ವಹಿಸಿದ್ದಕ್ಕಾಗಿ ನೀಡುವ ಕೂಲಿಯನ್ನು _______ ಕೂಲಿ ಎಂದು ಕರೆಯುತ್ತೇವೆ.

   ಅ) ತುಂಡು
   ಆ) ನೈಜ
   ಇ) ನಾಮಮಾತ್ರ
   ಈ) ಈ ಯಾವುದೂ ಅಲ್ಲ

4. ಗೇಣಿ = ವಾಸ್ತವಿಕ ಗಳಿಕೆ _______

   ಅ) ವಾಸ್ತವ ಉಳಿತಾಯ
   ಆ) ನಿವ್ವಳ ಗಳಿಕೆ
   ಇ) ವರ್ಗಾವಣೆ ಉಳಿತಾಯ
   ಈ) ವರ್ಗಾವಣೆ ಗಳಿಕೆ

5. ಎಲ್ಲಾ ಉತ್ಪಾದನಾಂಗಗಳಿಗೆ ಪ್ರತಿಫಲವನ್ನು ಹಂಚಿದ ನಂತರ ಉಳಿಯುವ ಆದಾಯವನ್ನು ________ ಎಂದು ಕರೆಯುತ್ತರೆ.

   ಅ) ಒಟ್ಟು ಲಾಭ
   ಆ) ಭರ್ಜರಿ ಸಾಮಾನ್ಯ ಲಾಭ
   ಇ) ಸಾಮಾನ್ಯ ಲಾಭ
   ಈ) ಈ ಯಾವುದೂ ಅಲ್ಲ

## II. ಈ ಕೆಳಗಿನ ವಾಕ್ಯಗಳಲ್ಲಿ ಖಾಲಿ ಬಿಟ್ಟ ಸ್ಥಳಗಳನ್ನು ತುಂಬಿರಿ.

1. ಹಂಚಿಕೆಯ ಪರಿಕಲ್ಪನೆಯನ್ನು _______ ಎಂದೂ ಕರೆಯಲಾಗುತ್ತದೆ.
2. ಗೇಣಿ ಅಧ್ಯಯನದ ಎರಡು ದೃಷ್ಟಿಕೋನಗಳೆಂದರೆ _______ ಮತ್ತು ________
3. ಬಡ್ಡಿಯನ್ನು _______ ಮತ್ತು _______ ಎಂದು ವರ್ಗೀಕರಿಸಬಹುದಾಗಿದೆ.
4. ಕೂಲಿಯು ಎಲ್ಲ ರೀತಿಯ _______ ಒಳಗೊಂಡಿದೆ.
5. ಉದ್ಯಮಿಯ ಸೇವೆಗೆ _______ ರೂಪದಲ್ಲಿ ಪ್ರತಿಫಲ ನೀಡಲಾಗುತ್ತದೆ.

## III. ಈ ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.

1. ಹಂಚಿಕೆ ಎಂದರೇನು?
2. ಭೂಮಿಯ ಸೇವೆಗೆ ಯಾವ ರೂಪದಲ್ಲಿ ಪ್ರತಿಫಲ ನೀಡಲಾಗುತ್ತದೆ?

3. ನೈಜ ಕೂಲಿಯನ್ನು ಹೇಗೆ ಲೆಕ್ಕಚಾರ ಮಾಡಲಾಗುವುದು?
4. ಬಡ್ಡಿ ಎಂದರೇನು?

5. ಉದ್ಯಮಿಗಳ ಸೇವೆಗೆ ಯಾವ ರೂಪದ ಪ್ರತಿಫಲ ನೀಡಲಾಗುತ್ತದೆ?

**IV. ಈ ಕೆಳಗಿನ ಪ್ರಶ್ನೆಗಳಿಗೆ ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿ.**

1. ಆಧುನಿಕ ಗೇಣಿ ಸಿದ್ಧಾಂತ ಎಂದರೇನು?
2. ಕೂಲಿ ಎಂದರೇನು?

3. ತುಂಡು ಕೂಲಿ ಮತ್ತು ಸಮಯಾಧಾರಿತ ಕೂಲಿಗಳ ನಡುವಿನ ವ್ಯತ್ಯಾಸವನ್ನು ತಿಳಿಸಿರಿ
4. ನಿವ್ವಳ ಲಾಭ ಎಂದರೇನು?

5. ಒಟ್ಟು ಬಡ್ಡಿಯ ಅಂಶಗಳನ್ನು ಪಟ್ಟಿ ಮಾಡಿರಿ.

**V. ಈ ಕೆಳಗಿನ ಪ್ರಶ್ನೆಗಳಿಗೆ ಎಂಟು ವಾಕ್ಯಗಳಲ್ಲಿ ಉತ್ತರಿಸಿ.** ಹಂಚಿಕೆಯ ಪರಿಕಲ್ಪನೆಯನ್ನು

ವಿವರಿಸಿರಿ.

1. ರಿಕಾರ್ಡೋರವರ ಗೇಣಿ ಸಿದ್ಧಾಂತವನ್ನು ಚರ್ಚಿಸಿರಿ.
2. ಕೂಲಿಯ ವಿಧಗಳ ಕುರಿತು ಟಿಪ್ಪಣಿ ಬರೆಯಿರಿ.

3. ಒಟ್ಟು ಬಡ್ಡಿಯನ್ನು ವಿಸ್ತೃತವಾಗಿ ವಿವರಿಸಿ.
4. ವಿಸ್ತೃತವಾಗಿ ಲಾಭದ ವಿಧಗಳನ್ನು ವಿವರಿಸಿ.

**ನಿಯೋಜಿತ ಕಾರ್ಯ:**

ನಿಮ್ಮ ಜಿಲ್ಲೆಯಲ್ಲಿ ಅಸ್ತಿತ್ವದಲ್ಲಿರುವ ಕೂಲಿಯ ವಿಧಗಳನ್ನು ಪಟ್ಟಿ ಮಾಡಿರಿ. ನಿಮ್ಮ ಜಿಲ್ಲೆಯಲ್ಲಿ ಭೂಮಿಯ ಗೇಣಿಯ ಲೆಕ್ಕಚಾರ ಹೇಗೆ ಮಾಡಲಾಗುತ್ತದೆ ಎಂಬುದರ ಕುರಿತು ಮಾಹಿತಿ ಸಂಗ್ರಹಿಸಿ ಬರೆಯಿರಿ.

## ಅಧ್ಯಾಯ- 4: ಹಣ

"ಪ್ರತಿ ಜ್ಞಾನದ ಶಾಖೆಯು ತನ್ನದೇ ಆದ ಮೂಲಭೂತ ಆವಿಷ್ಕಾರವನ್ನು ಹೊಂದಿದೆ. ಯಂತ್ರಶಾಸ್ತ್ರದಲ್ಲಿ ಗಾಲಿ, ವಿಜ್ಞಾನದಲ್ಲಿ ಬೆಂಕಿ, ರಾಜ್ಯಶಾಸ್ತ್ರದಲ್ಲಿ ಮತ ಹೇಗೋ, ಹಾಗೆಯೇ ಅರ್ಥಶಾಸ್ತ್ರದಲ್ಲಿ ಇಡೀ ವ್ಯವಹಾರಿಕ ಭಾಗದ ಮಾನವನ ಸಾಮಾಜಿಕ ಅಸ್ತಿತ್ವವು ಹಣದ ಆವಿಷ್ಕಾರದ ಮೇಲೆ ಆಧಾರಿತವಾಗಿದೆ" ಜೆಫರಿ ಕ್ರೌಥರ್

"ಹಣದ ಮಹತ್ವವು ಅದು ವರ್ತಮಾನ ಮತ್ತು ಭವಿಷ್ಯದ ನಡುವಿನ ಕೊಂಡಿಯಾಗಿರುವುದರಿಂದಾಗಿದೆ" ಜೆ. ಎಮ್. ಕೇನ್ಸ

### ಪೀಠಿಕೆ:

ಇಂದಿನ ಜೀವನದಲ್ಲಿ ಬಹಳಷ್ಟು ಮಟ್ಟಿಗೆ ಹಣವು ಎಲ್ಲವೂ ಆಗಿದೆ. ನಾವು ಹಣವನ್ನು ಗಳಿಸಲು ಶ್ರಮಿಸುತ್ತೇವೆ, ವಿವೇಕಯುತವಾಗಿ ಖರ್ಚು ಮಾಡುತ್ತೇವೆ ಮತ್ತು ಭವಿಷ್ಯದ ಅಗತ್ಯಗಳಿಗೆ ಉಳಿತಾಯವನ್ನು ಮಾಡುತ್ತೇವೆ. ಇದಕ್ಕೆ ಕಾರಣವೇನೆಂದರೆ ಕೇವಲ ಹಣವು ಮಾತ್ರ ನಮಗೆ ಅಗತ್ಯವಿರುವ ಯಾವುದೇ ಸರಕು ಅಥವಾ ಸೇವೆಯನ್ನು ಕೊಂಡುಕೊಳ್ಳಬಲ್ಲದಾಗಿದೆ. ಹಣವಿಲ್ಲದೇ ಯಾವುದೇ ಸರಕನ್ನು ಕೊಂಡುಕೊಳ್ಳಲು ಸಾಧ್ಯವಿಲ್ಲ. ಅನುಭೋಗಿಗಳಾಗಿ ನಾವು ಆಹಾರ, ಬಟ್ಟೆ, ಪುಸ್ತಕ, ಶೂ ಇತ್ಯಾದಿ ಸರಕುಗಳನ್ನು ಮತ್ತು ಶಿಕ್ಷಣ, ಆರೋಗ್ಯ, ಮನೋರಂಜನೆ ಇತ್ಯಾದಿ ಸೇವೆಗಳನ್ನು ಕೊಂಡುಕೊಳ್ಳುತ್ತೇವೆ. ಹಾಗೆಯೇ ಉತ್ಪಾದನಾ ಕಾರ್ಯಕ್ಕಾಗಿ ಉತ್ಪಾದಕರು ಕಚ್ಚಾ ವಸ್ತುಗಳು, ಶ್ರಮ, ಸಲಕರಣೆಗಳನ್ನು ಕೊಳ್ಳುವರು. ನಾವು ಹಣವೆಂದ ತಕ್ಷಣ ಕರೆನ್ಸಿ ನೋಟುಗಳ ಬಗ್ಗೆ ಯೋಚಿಸುತ್ತೇವೆ, ಹಣದ ಅನುಪಸ್ಥಿತಿಯಲ್ಲಿ ಆರ್ಥಿಕ ಚಟುವಟಿಕೆಗಳು ಸ್ತಬ್ಧವಾಗುತ್ತವೆ. ಹಾಗಾದರೆ, ಹಣ ಎಂದರೇನು? ಹಣದ ವಿಕಸನದ ವಿವಿಧ ಹಂತಗಳಾವುವು? ಸಾಟಿ ವಿನಿಮಯ ಪದ್ಧತಿ ಎಂದರೇನು? ಹಣದ ಕಾರ್ಯಗಳು ಯಾವುವು? ಒಳ್ಳೆಯ ಹಣದ ಲಕ್ಷಣಗಳಾವುವು? ಪ್ರಸ್ತುತ ಅಧ್ಯಾಯವು ಈ ಪ್ರಶ್ನೆಗಳಿಗೆ ಉತ್ತರವನ್ನು ಹುಡುಕುವುದು ಮತ್ತು ಹಣದ ವಿವಿಧ ಪರಿಭಾವನೆಗಳನ್ನು ಅನ್ವೇಷಿಸುವ ಪ್ರಯತ್ನ ಮಾಡುತ್ತದೆ.

### ಅರ್ಥ ಮತ್ತು ವ್ಯಾಖ್ಯೆಗಳು:

ಹಣವು ಮನುಕುಲದ ಅತ್ಯಂತ ಮಹತ್ವದ ಆವಿಷ್ಕಾರಗಳಲ್ಲಿ ಒಂದಾಗಿದೆ. ಹಣವು ದೈನಂದಿನ ವ್ಯವಹಾರವನ್ನು ಸುಲಭ ಮತ್ತು ಸುಲಲಿತಗೊಳಿಸುವುದು. ಇದನ್ನು ಸರ್ವಸಮ್ಮತ ವಿನಿಮಯ ಸಾಧನವಾಗಿ ಒಪ್ಪಿಕೊಳ್ಳಲಾಗಿದೆಯಲ್ಲದೆ ಹಣವು ಅನುಭೋಗ, ಉತ್ಪಾದನೆ, ಹಂಚಿಕೆ ಮತ್ತು ವಿನಿಮಯ ಪ್ರಕ್ರಿಯೆಗಳನ್ನು ಸುಗಮಗೊಳಿಸುವುದು.

ಪ್ರೊ. ವಾಕರ್‌ರವರ ಪ್ರಕಾರ ಹಣವೆಂದರೆ: "ಹಣವು ಏನನ್ನು ಮಾಡುವುದೋ ಅದುವೇ ಹಣವಾಗಿದೆ".

ಪ್ರೊ. ಸೆಲಿಗ್‌ಮನ್ ಅವರು 'ಯಾವ ವಸ್ತುವು ಸಾರ್ವತ್ರಿಕ ಸ್ವೀಕಾರಾರ್ಹತೆಯನ್ನು ಹೊಂದಿದೆಯೋ ಅದುವೇ ಹಣವಾಗಿದೆ' ಎಂದು ವ್ಯಾಖ್ಯಾನಿಸಿದ್ದಾರೆ. ಪ್ರೊ. ಸೆಲಿಗ್‌ಮನ್‌ರ ಅಭಿಪ್ರಾಯವೆಂದರೆ ಯಾವುದೇ ಸರಕು ಸಾರ್ವತ್ರಿಕವಾಗಿ ಜನರಿಂದ ಹಣವಾಗಿ ಸ್ವೀಕರಿಸಲ್ಪಟ್ಟಿರುತ್ತದೆಯೋ ಅದು ಹಣವಾಗಿರುತ್ತದೆ.

ಕ್ರೌಥರ್‌ರವರ ಪ್ರಕಾರ: "ವಿನಿಮಯ ಸಾಧನವಾಗಿ ಸಾರ್ವತ್ರಿಕ ಸ್ವೀಕಾರಾರ್ಹತೆಯನ್ನು ಹೊಂದಿರುವ ಮತ್ತು ಅದೇ ಸಮಯದಲ್ಲಿ ವಸ್ತುಗಳ ಮೌಲ್ಯಮಾಪನ ಸಾಧನವಾಗಿ ಮತ್ತು ಮೌಲ್ಯ ಸಂಗ್ರಹಣೆಯ ಸಾಧನವಾಗಿ ಬಳಕೆಯಾಗುವ ವಸ್ತು ಹಣವಾಗಿದೆ". ಅಂದರೆ ಹಣವು ವಿನಿಮಯ ಸಾಧನವಾಗಿ ಸಾರ್ವತ್ರಿಕವಾಗಿ ಸ್ವೀಕೃತವಾಗಬೇಕು, ಜೊತೆಗೆ ವಸ್ತುವಿನ ಮೌಲ್ಯ ನಿಗದಿ ಮಾಡಲಿಕ್ಕೆ ಮತ್ತು ಮೌಲ್ಯ ಸಂಗ್ರಹಣೆ ಮಾಡಲಿಕ್ಕೆ ಬಳಕೆಯಾಗಬೇಕು.

## ಹಣದ ವಿಕಸನದ ಹಂತಗಳು:

ಮಾನವನು ಅನಾದಿ ಕಾಲದಿಂದಲೂ ಹಲವು ರೀತಿಯ ವಸ್ತುಗಳನ್ನು ಹಣದ ರೂಪದಲ್ಲಿ ಬಳಸಿದ್ದಾನೆ. ಹಣವನ್ನು ಬೇರೆ ಬೇರೆ ಅವಧಿಗಳಲ್ಲಿ ಮತ್ತು ಸ್ಥಳಗಳಲ್ಲಿ ಹಲವಾರು ರೂಪಗಳಲ್ಲಿ ಬಳಸಲಾಗುತ್ತಿತ್ತು.

ಸಾಟಿ ವಿನಿಮಯ ಪದ್ಧತಿಯ ನಂತರ ಹಣದ ವಿಕಸನದ ಪ್ರಮುಖ ಹಂತಗಳೆಂದರೆ

1. ಸರಕಿನ ರೂಪದ ಹಣ
2. ಲೋಹದ ಹಣ
3. ಕಾಗದದ ಹಣ
4. ಬ್ಯಾಂಕಿನ ಹಣ
5. ಪ್ಲಾಸ್ಟಿಕ್ ಹಣ
6. ಎಲೆಕ್ಟ್ರಾನಿಕ್ ಹಣ

**1. ಸರಕಿನ ರೂಪದ ಹಣ:** ಬಳಸಲ್ಪಡುತ್ತಿದ್ದರೆ ಅದುವೇ ಸರಕಿನ ರೂಪದ ಹಣವಾಗಿದೆ. ನಿರ್ದಿಷ್ಟ ಗಾತ್ರ ಮತ್ತು ತೂಕವನ್ನು ಹೊಂದಿರುವ ಒಂದು ಸರಕು ಅಥವಾ ವಸ್ತುವನ್ನು ಹಣವಾಗಿ ಪರಿಗಣಿಸಲಾಗಿರುವುದು ಮತ್ತು ಎಲ್ಲಾ ಸರಕುಗಳ ಮೌಲ್ಯವನ್ನು ಆ ವಸ್ತುವಿನ ಮೂಲಕ ಮಾಪನ ಮಾಡಲಾಗುತ್ತದೆ. ವಿವಿಧ ದೇಶಗಳಲ್ಲಿ ವಿವಿಧ ಅವಧಿಗಳಲ್ಲಿ ಹಲವು ಸರಕುಗಳನ್ನು ಹಣವಾಗಿ ಬಳಸಲಾಗುತ್ತಿತ್ತು. ಉದಾಹರಣೆಗೆ ಗ್ವಾಟೆಮಾಲಾದಲ್ಲಿ ಮೆಕ್ಕೆಜೋಳ, ಸ್ವೀಡನ್ನಿನಲ್ಲಿ ಹಸು ಮತ್ತು ಬಟ್ಟೆ, ಹಂಗೇರಿಯಲ್ಲಿ ಆಕಳುಕರುಗಳು,

ನಾರ್ವೆಯಲ್ಲಿ ಬೆಣ್ಣೆ, ಬ್ರೆಜಿಲ್‌ನಲ್ಲಿ ಬಾಣ ಮತ್ತು ಬಂದೂಕುಗಳು, ಜಪಾನ್‌ನಲ್ಲಿ ಚಿನ್ನದ ದೂಳನ್ನು ಸರಕು ರೂಪದ ಹಣವಾಗಿ ಬಳಸಲಾಗಿದೆ.

2. **ಲೋಹದ ಹಣ:**

ಮಾನವನಿಗೆ ಚಿನ್ನ ಮತ್ತು ತಾಮ್ರದಂಥ ಲೋಹಗಳ ಬಳಕೆಯು ಕ್ರಿ.ಪೂ. 6000 ಶತಮಾನದಿಂದ ತಿಳಿದಿತ್ತು. ಮಾನವನ ನಾಗರಿಕತೆಯಲ್ಲಿನ ಪ್ರಗತಿಯು ಇವುಗಳನ್ನು ಹಣವಾಗಿ ಬಳಸಲು ನೆರವು ನೀಡಿತು. ಬೆಲೆ ಬಾಳುವ ಲೋಹಗಳಾದ ಚಿನ್ನ, ಬೆಳ್ಳಿ, ತಾಮ್ರ, ಕಂಚು ಮುಂತಾದವುಗಳು ಅವುಗಳ ಕೊರತೆ, ಉಪಯುಕ್ತತೆ, ಆಕರ್ಷಕತೆಯಿಂದಾಗಿ ಹಣವಾಗಿ ಬಳಸಲಾಯಿತು. ಈ ಬೆಲೆಬಾಳುವ ಲೋಹಗಳನ್ನು ನಿರ್ದಿಷ್ಟ ಗಾತ್ರ, ತೂಕ, ಗುಣಮಟ್ಟ ಮತ್ತು ಔಚಿತ್ಯಕ್ಕೆ ತಕ್ಕ ಹಾಗೆ ಕತ್ತರಿಸಿ, ಅಲ್ಲಿನ ಆಡಳಿತಗಾರ ಮುದ್ರೆಗಳನ್ನು ಹಾಕಿ ಲೋಹದ ನಾಣ್ಯವನ್ನು ಕಾನೂನು ಬದ್ಧವಾಗಿಸಿ, ಎಲ್ಲ ಜನರು ಆಯಾ ಅವಧಿಯಲ್ಲಿ ಒಪ್ಪಿಕೊಳ್ಳುವಂತೆ ಮಾಡಲಾಗುತ್ತಿತ್ತು. ಸುಲಭ ಪಾವತಿಗಾಗಿ ಹಲವು ಮುಖಬೆಲೆಯ ಲೋಹದ ನಾಣ್ಯಗಳು ಚಲಾವಣೆಯಲ್ಲಿದ್ದವು. ಸರಕಿನ ರೂಪದ ಹಣಕ್ಕಿಂತ ಲೋಹದ ಹಣವು ಹೆಚ್ಚು ಅನುಕೂಲಕರವಾಗಿದ್ದು, ಸಂಗ್ರಹ ಯೋಗ್ಯ ಮತ್ತು ಸಾಗಣಿಕೆಗೆ ಸುಲಭವಾದುದಾಗಿತ್ತು.

3. **ಕಾಗದದ ಹಣ:**

ಲೋಹದ ಹಣವು ಭಾರವಾಗಿದ್ದು ಸುಲಭ ಮತ್ತು ಸುರಕ್ಷಿತ ಸಾಗಾಟಕ್ಕೆ ಅನುಕೂಲಕರವಾಗಿರಲಿಲ್ಲ. ಆದುದರಿಂದ ವ್ಯಾಪಾರಸ್ಥರು ಹೆಸರಾಂತ ಬಂಡವಾಳದಾರನ ಹತ್ತಿರ ತಮ್ಮ ಬಳಿಯಿದ್ದ ಹಣಕ್ಕೆ ಸಾಕ್ಷಿಯಾಗಿ ಲಿಖಿತ ದಾಖಲೆಗಳನ್ನು ವಿನಿಮಯ ಮಾಡಲು ಪ್ರಾರಂಭಿಸಿದರು. ಮೊಟ್ಟ ಮೊದಲು ಬಳಕೆಯಾದ ಕಾಗದದ ಹಣವು ಕ್ರಿ. ಶ. 806 ರಲ್ಲಿ ಚೀನಾದ ಟ್ಯಾಂಗ್ ರಾಜವಂಶರ ಅವಧಿಯಲ್ಲಿ ಪತ್ತೆಯಾಗಿದೆ. ಅಲ್ಲಿ ಅವರು ದೂರದ ಪ್ರದೇಶಗಳಿಗೆ ಹಣವನ್ನು ವರ್ಗಾಯಿಸಲು 'ಕಾಂಪೆನ್ಸೇಶನ್ ನೋಟ್' ಗಳನ್ನು ಇಲ್ಲವೆ 'ಫ್ಲೈಯಿಂಗ್ ಕರೆನ್ಸಿ' ಯನ್ನು ಬಳಸುತ್ತಿದ್ದರು. ನೈಜವಾದ ಕಾಗದದ ಹಣವನ್ನು ಪ್ರಥಮಬಾರಿಗೆ ಚೈನಾದ ಸಾಂಗ್ ರಾಜಮನೆತವು ಕ್ರಿ. ಶ. 1023 ರಲ್ಲಿ ಚಲಾವಣೆಗೆ ತಂದಿತು. ಆನಂತರ ಇದು ಯುರೋಪ್‌ವರೆಗೂ ವಿಸ್ತಾರವಾಯಿತು. ಭಾರತದಲ್ಲಿ ಕಾಗದದ ಹಣವನ್ನು 19 ನೇ ಶತಮಾನದಲ್ಲಿ ಬ್ರಿಟಿಷರು ಪರಿಚಯಿಸಿದರು.

1861 ರ ಪೇಪರ್ ಕರೆನ್ಸಿ ಕಾಯ್ದೆಯು ಭಾರತದಲ್ಲಿ ಬ್ರಿಟಿಷ್ ಸರ್ಕಾರಕ್ಕೆ ನೋಟನ್ನು ಚಲಾಯಿಸುವ ಏಕಸ್ವಾಮ್ಯ ಅಧಿಕಾರ ನೀಡಿತ್ತು. ಭಾರತೀಯ ರಿಸರ್ವ್ ಬ್ಯಾಂಕನ್ನು (ಆರ್. ಬಿ. ಐ.) ಭಾರತದ ಕೇಂದ್ರ ಬ್ಯಾಂಕಾಗಿದೆ. ಇದನ್ನು 1 ನೇಯ ಏಪ್ರಿಲ್ 1935 ರಂದು ಕೋಲ್ಕತ್ತಾದಲ್ಲಿ ಸ್ಥಾಪಿಸಲಾಯಿತು. ಆರ್. ಬಿ. ಐ. ಜನವರಿ 1938 ರಲ್ಲಿ ಪ್ರಥಮ ಬಾರಿಗೆ ಐದು ರೂಪಾಯಿಯ ನೋಟನ್ನು ಚಲಾವಣೆಯಲ್ಲಿ ತಂದಿತು. ಆನಂತರ ಅದೇ ವರ್ಷದಲ್ಲಿ 10, 100, 1000 ಮತ್ತು 10000 ರೂಪಾಯಿ ಮುಖಬೆಲೆಯ ನೋಟುಗಳನ್ನು ಚಲಾವಣೆಗೆ ತಂದಿತು. ಈ ನೋಟುಗಳು ಆರ್. ಬಿ. ಐ. ನ ಎರಡನೇ

ಗವರ್ನರ್ ಸರ್ ಜೇಮ್ಸ್ ಟೇಲರ್‌ರವರು ಸಹಿಯನ್ನು ಹೊಂದಿತ್ತು. ಸರ್ ಆಸ್ಬಾರ್ನ್ ಸ್ಮಿತ್‌ರವರು ಆರ್. ಬಿ. ಐ. ನ ಮೊದಲನೇ ಗವರ್ನರ್ ಆಗಿದ್ದರೂ ಸಹ ಯಾವುದೇ ಬ್ಯಾಂಕಿನ ನೋಟಿನ ಮೇಲೆ ಇವರು ಸಹಿ ಮಾಡಲಿಲ್ಲ.

ಜನವರಿ 1, 1949 ರಂದು ಆರ್.ಬಿ.ಐ.ನ್ನು ರಾಷ್ಟ್ರೀಕರಣ ಮಾಡಲಾಯಿತು. ಆರ್.ಬಿ.ಐ. ಭಾರತದಲ್ಲಿ ನೋಟುಗಳ ಚಲಾವಣೆ ಮತ್ತು ಪೂರೈಕೆಯನ್ನು ನಿಯಂತ್ರಣ ಮಾಡುತ್ತದೆ.

**4. ಬ್ಯಾಂಕ್ ಹಣ:**

ಹಣಕಾಸಿನ ವ್ಯವಸ್ಥೆಯಲ್ಲಿ ಸುಧಾರಣೆ ಮತ್ತು ವ್ಯಾಪಾರ ವಹಿವಾಟುಗಳಲ್ಲಿನ ಪ್ರಗತಿಯು ಬ್ಯಾಂಕ್ ಹಣದ ಸೃಷ್ಟಿಗೆ ಮತ್ತು ಸ್ವೀಕಾರಾರ್ಹತೆಗೆ ಕಾರಣವಾಯಿತು. ಚೆಕ್, ಡ್ರಾಫ್ಟ್, ಬ್ಯಾಂಕ್‌ನ ಸಾಲಪತ್ರ, ಸಮ್ಮತಿ ಪತ್ರಗಳು ಮತ್ತು ಇತರೆ ಬ್ಯಾಂಕಿನ ದಾಖಲೆಗಳ ಬಳಕೆಯನ್ನು ಬ್ಯಾಂಕ್ ಹಣ ಎನ್ನುವರು. ಒಂದು ಖಾತೆಯಿಂದ ಮತ್ತೊಂದು ಖಾತೆಗೆ ಅಥವಾ ಒಂದು ಬ್ಯಾಂಕಿನಿಂದ ಮತ್ತೊಂದು ಬ್ಯಾಂಕಿಗೆ ಹಣದ ವರ್ಗಾವಣೆಯನ್ನು ಈ ದಾಖಲೆಗಳ ಮೂಲಕ ಸುಲಭವಾಗಿ ಮಾಡಬಹುದು. ಇತ್ತೀಚಿನ ದಿನಗಳಲ್ಲಿ ಬ್ಯಾಂಕು ಹಣದ ಮುಂದುವರೆದ ರೂಪವಾಗಿ ಪ್ಲಾಸ್ಟಿಕ್ ಹಣ ಮತ್ತು ಎಲೆಕ್ಟ್ರಾನಿಕ್ ಹಣದ ಬಳಕೆ ವಿಸ್ತೃತವಾಗಿ ಚಾಲ್ತಿಯಲ್ಲಿದೆ.

**5. ಪ್ಲಾಸ್ಟಿಕ್ ಹಣ:**

ಪ್ಲಾಸ್ಟಿಕ್ ಹಣವೆಂದರೆ ಎಲ್ಲಾ ವಿಧದ ಬ್ಯಾಂಕಿನ ಕಾರ್ಡುಗಳಾದ ಕ್ರೆಡಿಟ್ ಕಾರ್ಡು, ಡೆಬಿಟ್ ಕಾರ್ಡ್, ಸ್ಮಾರ್ಟ್ ಕಾರ್ಡ್ ಇತ್ಯಾದಿಗಳಾಗಿವೆ. ಇದನ್ನು 1950 ರಲ್ಲಿ ಪ್ರಥಮ ಬಾರಿಗೆ ಬಳಸಲಾಯಿತು. ಸರಕು ಮತ್ತು ಸೇವೆಗಳಿಗೆ ಪಾವತಿಸಲು ಇದು ಅತ್ಯಂತ ಸುಲಭದ ವಿಧಾನವಾಗಿದೆ. ಇದು ದೊಡ್ಡ ಮೊತ್ತದ ನಗದಿನ ವ್ಯವಹಾರ ನಿರ್ವಹಿಸುವಲ್ಲಿನ ಗಂಡಾಂತರವನ್ನು ಕಡಿಮೆ ಮಾಡಿದೆ. ಇದನ್ನು ಕಾಗದದ ಹಣಕ್ಕೆ ಪರ್ಯಾಯವಾಗಿ ಬಳಸಲಾಗುತ್ತದೆ. ಇದು ತನ್ನಿಂದ ತಾನೇ ಹಣವಾಗಿರುವುದಿಲ್ಲ. ಆದರೆ ಕೆಲ ನಿರ್ದಿಷ್ಟ ಸನ್ನಿವೇಶಗಳಲ್ಲಿ ಹಣವಾಗಿ ಕಾರ್ಯ ನಿರ್ವಹಿಸುತ್ತದೆ. ಈ ಕಾರ್ಡುಗಳು ಹಣರಹಿತ ವ್ಯವಹಾರಕ್ಕೆ ನೆರವಾಗುತ್ತದೆ.

**ಎಲೆಕ್ಟ್ರಾನಿಕ್ ಹಣ:**

ಇಂದಿನ ಡಿಜಿಟಲ್ ಯುಗದಲ್ಲಿ ಹಣವೂ ಸಹಿತ ಡಿಜಿಟಲ್ ರೂಪ ಪಡೆದಿದ್ದು, ವಿದ್ಯುನ್ಮಾನ ಸಾಧನಗಳ ಮುಖಾಂತರ ವ್ಯವಹಾರ ಹಾಗೂ ಹಣದ ಪಾವತಿ ಹಾಗೂ ವರ್ಗಾವಣೆ ಜರುಗುತ್ತದೆ. ಇಲ್ಲಿ ಎಲೆಕ್ಟ್ರಾನಿಕ್ ಉಪಕರಣ ಅಥವಾ ಒಂದು ಸರ್ವರ್‌ನಲ್ಲಿ ಎಲ್ಲ ಮಾಹಿತಿ ಶೇಖರಿಸಿ ತನ್ಮೂಲಕ ಎಲ್ಲ ವ್ಯವಹಾರಗಳನ್ನು ನಿಯಂತ್ರಿಸಲಾಗುತ್ತದೆ. ಆನ್‌ಲೈನ್ ಬ್ಯಾಂಕಿಂಗ್, ಅಂತರ್ಜಾಲದ ಮೂಲಕ ಮಾಡುವ ವಾಣಿಜ್ಯ ವ್ಯವಹಾರ, ವಿದ್ಯುನ್ಮಾನ ಹಣ

ವರ್ಗಾವಣೆಗಳೆಲ್ಲವನ್ನೂ ಎಲೆಕ್ಟ್ರಾನಿಕ್ ಹಣ ಎನ್ನಬಹುದು. ಪ್ರಸ್ತುತ ಹಲವಾರು ಹಣಕಾಸಿನ ವ್ಯವಹಾರಗಳನ್ನು ಎಲೆಕ್ಟ್ರಾನಿಕ್ ಹಣದ ಮೂಲಕ ಮಾಡಲಾಗುತ್ತಿದೆ.

## ಸಾಟಿ ವಿನಿಮಯ ಪದ್ಧತಿ:

**ಅರ್ಥ:** ಸಾಟಿ ವಿನಿಮಯ ಪದ್ಧತಿಯು ಅತ್ಯಂತ ಪುರಾತನವಾದ ವಿನಿಮಯ ಪದ್ಧತಿಯಾಗಿದೆ. ಆಗ ಮಾನವನ ಬಯಕೆಗಳು ಬಹಳ ಸರಳ ಮತ್ತು ಮಿತವಾಗಿದ್ದವು. ವ್ಯಕ್ತಿಗಳು ತಮ್ಮ ಬಯಕೆಗಳನ್ನು ಈಡೇರಿಸಿಕೊಳ್ಳಲು ಸರಕುಗಳನ್ನು ಪರಸ್ಪರ ವಿನಿಮಯ ಮಾಡಿಕೊಳ್ಳುವ ಪದ್ಧತಿ ಜಾರಿಯಲ್ಲಿತು. ಹೀಗೆ ಹಣದ ಬಳಕೆ ಇಲ್ಲದೇ ಸರಕುಗಳನ್ನು ಸರಕಿಗೆ ನೇರವಾಗಿ ವಿನಿಮಯ ಮಾಡಿಕೊಳ್ಳುವುದನ್ನು ಸಾಟಿ ಪದ್ಧತಿ ಎಂದು ಕರೆಯಬಹುದು. ಪ್ರಪಂಚದ ಹಲವು ನಾಗರೀಕತೆಗಳ ಆದಿಯಲ್ಲಿ ಇದು ವಿನಿಮಯದ ಪ್ರಧಾನ ಮಾರ್ಗವಾಗಿತ್ತು. ಹಣದ ಅವಿಷ್ಕಾರಕ್ಕಿಂತ ಮೊದಲು ಸಾಟಿ ಪದ್ಧತಿಯನ್ನು ಸರಕು ಮತ್ತು ಸೇವೆಗಳ ವಿನಿಮಯಕ್ಕೆ ಬಳಸಲಾಗುತ್ತಿತ್ತು. ಭಾರತದ ಹಲವು ಬುಡಕಟ್ಟು ಸಮಾಜದ ಕುಟುಂಬಗಳು ಆಹಾರ ಮತ್ತು ಇತರೆ ಸೇವೆಗಳಿಗೆ ಪ್ರತಿಯಾಗಿ ಕಾರ್ಮಿಕ ಸೇವೆಯನ್ನು ವಿನಿಮಯಕ್ಕೆ ಬಳಸುತ್ತಿದ್ದರು. ಉದಾಹರಣೆಗೆ ಒಂದು ಕುಟುಂಬಕ್ಕೆ ಸುಗ್ಗಿ ಕೊಯಿಲ್ಲಿನ ಸಂದರ್ಭದಲ್ಲಿ ಕಾರ್ಮಿಕರ ಅಗತ್ಯವಿದ್ದರೆ, ಉಳಿದ ಕುಟುಂಬಗಳು ತಮ್ಮ ಸೇವೆಯನ್ನು ಸಹಾಯ ಪಡೆದ ಕುಟುಂಬವು, ಸಹಾಯ ನೀಡಿದ ಕುಟುಂಬಗಳಿಗೆ ಸುಗ್ಗಿ ಕೊಯಿಲ್ಲಿನ ಅಥವಾ ಮನೆ ಮಾಳಿಗೆ ಹಾಕುವ ಸಂದರ್ಭದಲ್ಲಿ ಸೇವೆಯ ನೆರವು ನೀಡುವರೆಂಬ ಭರವಸೆಯಿಂದ ಒದಗಿಸುತ್ತಿದ್ದವು. ಈ ರೀತಿಯ ಆಚರಣೆಯು ಈಗಲೂ ಭಾರತದ ಬುಡಕಟ್ಟು ಕುಟುಂಬಗಳಲ್ಲಿವೆ. ಹಲವು ವೃತ್ತಿಗಳಲ್ಲಿನ ಜನರು ಉದಾಹರಣೆ ರೈತರು, ಕುಶಲಕರ್ಮಿಗಳು, ಬಡಗಿಗಳು, ಇತ್ಯಾದಿ, ತಮ್ಮ ಸರಕು ಮತ್ತು ಸೇವೆಗಳನ್ನು ತಮ್ಮ ತಮ್ಮೊಳಗೆ ವಿನಿಮಯ ಮಾಡಿಕೊಳ್ಳುವರು.

### *ಸಾಟಿ ವಿನಿಮಯ ಪದ್ಧತಿಯ ಅನುಕೂಲಗಳು:*

ಸಾಟಿ ವಿನಿಮಯ ಪದ್ಧತಿಯಲ್ಲಿ ಹಲವು ಅನುಕೂಲಗಳಿದ್ದು, ಅವುಗಳಲ್ಲಿ ಪ್ರಮುಖವಾಗಿ:

1. **ಸಾಟಿ ವಿನಿಮಯ ಪದ್ಧತಿಯು ವಿನಿಮಯ ಸರಳ ಪದ್ಧತಿಯಾಗಿದೆ:** ಸಾಟಿ ವಿನಿಮಯ ಪದ್ಧತಿಯು ಸರಕು ಮತ್ತು ಸೇವೆಗಳನ್ನು ಸರಕು ಮತ್ತು ಸೇವೆಗಳೊಂದಿಗೆ ವಿನಿಮಯ ಮಾಡಿಕೊಳ್ಳಲು ನೆರವಾಗುತ್ತದೆ. ಬಯಕೆಗಳು ಮಿತವಾಗಿರುವ ಸರಳ ವ್ಯವಸ್ಥೆಯಲ್ಲಿ ಇದು ಉತ್ತಮವಾಗಿ ಕಾರ್ಯನಿರ್ವಹಿಸುತ್ತದೆ.
2. **ಕಡಿಮೆ ಅಥವಾ ಅಧಿಕ ಉತ್ಪಾದನೆಯ ಸಾಧ್ಯತೆಯಿಲ್ಲ:** ಸಮಾಜದ ಅಗತ್ಯಕ್ಕೆ ತಕ್ಕ ಹಾಗೆ ಸರಕುಗಳನ್ನು ಉತ್ಪಾದಿಸುವುದರಿಂದ ಸರಕುಗಳ ಅಧಿಕ್ಯ ಅಥವಾ ಕೊರತೆ ಸಂಭವಿಸುವುದಿಲ್ಲ.

3. **ಸಂಪನ್ಮೂಲಗಳ ದುರುಪಯೋಗವಿಲ್ಲ:** ಸಮಾಜದ ಅಗತ್ಯತೆಯ ಆಧಾರದಲ್ಲಿ ಸರಕು ಮತ್ತು ಸೇವೆಗಳನ್ನು ಉತ್ಪಾದಿಸುವುದರಿಂದ ಸಂಪನ್ಮೂಲಗಳ ದುರುಪಯೋಗವಾಗುವುದಿಲ್ಲ.
4. **ಸಂಪತ್ತು ಕೆಲವರ ಬಳಿಯೇ ಸಂಗ್ರಹವಾಗುವುದಿಲ್ಲ:** ಸಾಟಿ ವಿನಿಮಯ ಪದ್ಧತಿಯು ಸಂಪತ್ತು ಕೆಲವರ ಬಳಿಯೇ ಸಂಗ್ರಹವಾಗುವುದನ್ನು ತಡೆಯುತ್ತದೆ. ಏಕೆಂದರೆ ವಿನಿಮಯವಾದ ಸರಕನ್ನು ದೀರ್ಘಕಾಲದವರೆಗೆ ಸಂಗ್ರಹಿಸಲು ಸಾಧ್ಯವಿಲ್ಲ.
5. **ಸಾಟಿ ವಿನಿಮಯ ಪದ್ಧತಿಯ ಪಾಲುದಾರರಲ್ಲಿ ಸ್ವಾವಲಂಬನೆ ಸಾಧ್ಯವಾಗುವುದು:** ಸಾಟಿ ವಿನಿಮಯ ಪದ್ಧತಿಯ ಪಾಲುದಾರರು ಸ್ವಾವಲಂಬನೆ ಹೊಂದಲು ನೆರವಾಗುತ್ತದೆ.
6. **ಮಾರಾಟಗಾರರು ಮತ್ತು ಗ್ರಾಹಕರ ನಡುವೆ ನೇರ ಸಂಪರ್ಕ:** ಸಾಟಿ ವಿನಿಮಯ ಪದ್ಧತಿಯು ಮಾರಾಟಗಾರರು ಮತ್ತು ಗ್ರಾಹಕರ ನಡುವೆ ನೇರ ಸಂಪರ್ಕವನ್ನು ಸ್ಥಾಪಿಸುತ್ತದೆಯಾದ್ದರಿಂದ ಯಾರೊಬ್ಬರ ಶೋಷಣೆಯೂ ಕಂಡುಬರುವುದಿಲ್ಲ.
7. **ಆರ್ಥಿಕ ಆವರ್ತಗಳ ಸಮಸ್ಯೆಗಳಿರುವುದಿಲ್ಲ:** ಸಾಟಿ ವಿನಿಮಯ ಪದ್ಧತಿಯಲ್ಲಿ ಸರಕುಗಳ ಅಧಿಕ್ಯ ಅಥವಾ ಕೊರತೆಯಿಲ್ಲದಿರುವುದರಿಂದ, ಆಧುನಿಕ ಆರ್ಥಿಕ ಸಮಸ್ಯೆಗಳಾದ ಹಣದುಬ್ಬರ, ಹಣದಿಳಿತ, ಮುಗ್ಗಟ್ಟು, ಹಣಕಾಸಿನ ಬಿಕ್ಕಟ್ಟು ಇತ್ಯಾದಿಗಳು ಕಂಡುಬರುವುದಿಲ್ಲ.

### *ಸಾಟಿ ವಿನಿಮಯ ಪದ್ಧತಿಯ ಅನಾನುಕೂಲತೆಗಳು:*

ಸಾಟಿ ವಿನಿಮಯ ಪದ್ಧತಿಯ ಪ್ರಮುಖ ಅನಾನುಕೂಲತೆಗಳೆಂದರೆ:

1. **ಬಯಕೆಗಳ ದ್ವಿಮುಖ ಹೊಂದಾಣಿಕೆಯ ಅಭಾವ:** ಸಾಟಿ ವಿನಿಮಯ ಪದ್ಧತಿಯು ಕೊಳ್ಳುವವರು ಮತ್ತು ಮಾರಾಟಗಾರರ ಬಯಕೆಗಳ ಹೊಂದಾಣಿಕೆಯಾದಾಗ ಮಾತ್ರ ಕಾರ್ಯನಿರ್ವಹಿಸುವುದು. ಅಂದರೆ ಸಾಟಿ ವಿನಿಮಯ ಪದ್ಧತಿಯಲ್ಲಿ ವಿನಿಮಯ ಸಂಭವಿಸಲು ಒಬ್ಬ ವ್ಯಕ್ತಿ ಗೋಧಿಯನ್ನು ಮಾರಾಟ ಮಾಡಿ ಅಕ್ಕಿಯನ್ನು ಕೊಳ್ಳಲು ಇಚ್ಛಿಸಿದ್ದರೆ, ಆತನು ಗೋಧಿಯನ್ನು ಕೊಂಡು, ಅಕ್ಕಿಯನ್ನು ಮಾರಲು ಇಚ್ಛಿಸುವವರನ್ನೇ ಹುಡುಕಬೇಕು. ಆದರೆ ಇದು ಅತ್ಯಂತ ಕಷ್ಟಕರವಾದ್ದರಿಂದ ಒಟ್ಟಾರೆ ವ್ಯವಹಾರವನ್ನು ನಿರ್ಬಂಧಿಸುವುದು.
2. **ಸರಕುಗಳ ಮೌಲ್ಯ ನಿರ್ಣಯದ ಸಾಮಾನ್ಯ ಮಾಪನದ ಕೊರತೆ:** ಸಾಟಿ ವಿನಿಮಯ ಪದ್ಧತಿಯಲ್ಲಿ ಸರಕುಗಳ ಮೌಲ್ಯವನ್ನು ನಿಖರವಾಗಿ ಮಾಪನ ಮಾಡಲು ಒಂದು ಸಾಮಾನ್ಯ ಸಾಧನ ಲಭ್ಯವಿಲ್ಲ. ಇದು ಸಾಟಿ ವಿನಿಮಯ ಪದ್ಧತಿಯನ್ನು ಕಷ್ಟಕರವಾಗಿಸುವುದು. ಒಂದು ಕೆ. ಜಿ. ರಾಗಿಯನ್ನು ಎಷ್ಟು ಕೆ. ಜಿ ಅಕ್ಕಿಗೆ ವಿನಿಮಯಿಸುವುದು ಅಥವಾ ಒಂದು ಕುರ್ಚಿಗೆ ಎಷ್ಟು ಕೆ. ಜಿ. ರಾಗಿ ಎಂಬುದನ್ನು

ಸ್ಪಷ್ಟವಾಗಿ ನಿರ್ಧರಿಸಲು ಸಾಧ್ಯವಾಗುವುದಿಲ್ಲವಾದ್ದರಿಂದ ಸರಕುಗಳ ಮೌಲ್ಯ ನಿರ್ಣಯಿಸುವುದು ಅತಿ ಕಷ್ಟಕರ.

3. **ವಿಳಂಬಿತ ಪಾವತಿಯ ಸಾಧನದ ಕೊರತೆ:** ಸಾಟಿ ವಿನಿಮಯ ಪದ್ಧತಿಯು ಸಾಲದ ವ್ಯವಹಾರ ಅಥವಾ ಭವಿಷ್ಯದ ಪಾವತಿ ವ್ಯವಹಾರಗಳನ್ನು ಸುಗಮವಾಗಿಸುವುದಿಲ್ಲ. ಭವಿಷ್ಯದ ದಿನದಂದು ಅದೇ ಗುಣಮಟ್ಟದ ಸರಕನ್ನು ಒದಗಿಸುವುದು ಕಷ್ಟಕರವಾಗುತ್ತದೆ. ಅಲ್ಲದೇ ಅದೇ ಸರಕನ್ನು ಹಿಂದಿರುಗಿಸಿದರೂ ಸರಕಿನ ಗುಣಮಟ್ಟ ಮತ್ತು ಮೌಲ್ಯ ಮುಂಚಿನ ಹಾಗೆಯೇ ಇರುತ್ತದೆ ಎಂದು ಹೇಳಲಾಗುವುದಿಲ್ಲ.
4. **ವಿಭಜನೆಯ ಕೊರತೆ:** ಸಾಟಿ ವಿನಿಮಯ ಪದ್ಧತಿಯಲ್ಲಿ ವಿಭಜನೆಯ ಕೊರತೆ ಸಮಸ್ಯೆಯಿದೆ. ಹಲವು ದೊಡ್ಡ ಸರಕುಗಳನ್ನು ಸಾಟಿ ವಿನಿಮಯ ಪದ್ಧತಿಯಲ್ಲಿ ಸಣ್ಣ ಘಟಕಗಳಾಗಿ ವಿಭಜಿಸಲು ಸಾಧ್ಯವಾಗುವುದಿಲ್ಲ.

5. **ಮೌಲ್ಯ ಸಂಗ್ರಹಣೆಯ ಕೊರತೆ:** ಸಾಟಿ ವಿನಿಮಯ ಪದ್ಧತಿಯಲ್ಲಿ ವ್ಯಾಪಾರಸ್ಥರು ಸರಕಿನ ಮೌಲ್ಯವನ್ನು ದೀರ್ಘಕಾಲದವರೆಗೆ ಸಂಗ್ರಹಿಸಿಡಲು ಸಾಧ್ಯವಿಲ್ಲ. ಉದಾಹರಣೆ ತರಕಾರಿ, ಹಣ್ಣು, ಧಾನ್ಯಗಳು ಬೇಗನೆ ಹಾಳಾಗುವುದು.
6. **ಸಾಗಾಟದಲ್ಲಿನ ಗಂಡಾಂತರಗಳು:** ದ್ವಿಮುಖ ಹೊಂದಾಣಿಕೆಗಾಗಿ ಸಾಟಿ ವಿನಿಮಯ ಪದ್ಧತಿಯಲ್ಲಿ ಸರಕು ಮತ್ತು ಸೇವೆಗಳನ್ನು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಸಾಗಾಟ ಮಾಡಬೇಕಾಗುವುದು. ದೊಡ್ಡ ಗಾತ್ರದ ಸರಕುಗಳನ್ನು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಕೊಳ್ಳುವವರಿಗಾಗಿ ಹುಡುಕುತ್ತ ಸಾಗುವುದರಿಂದ ಸಾಗಾಟದಲ್ಲಿನ ಗಂಡಾಂತರ ಎದುರಾಗುತ್ತದೆ. ಸಾಟಿ ವಿನಿಮಯ ಪದ್ಧತಿಯು ವ್ಯಕ್ತಿಗಳು ಮತ್ತು ಸಮಾಜದ ಅಗತ್ಯ ಮತ್ತು ಬಯಕೆಗಳು ಮಿತ ಮತ್ತು ಸರಳವಾಗಿದ್ದಾಗ ಉತ್ತಮವಾಗಿ ಕಾರ್ಯನಿರ್ವಹಿಸುತ್ತಿತ್ತು. ನಾಗರಿಕತೆಯ ಬೆಳವಣಿಗೆಯಾದಂತೆ, ಜನರ ಬಯಕೆಗಳು ಅಧಿಕ ಹಾಗೂ ಸಂಕೀರ್ಣವಾದಂತೆ ಸಾಟಿ ವಿನಿಮಯ ಪದ್ಧತಿಯು ಹೆಚ್ಚು ಹೆಚ್ಚು ಕಷ್ಟಕರವಾಯಿತು. ಸಾಟಿ ವಿನಿಮಯ ಪದ್ಧತಿಯ ಅನುಕೂಲತೆಗಳು ಹಣವು ವಿನಿಮಯ ಮಾಧ್ಯಮವಾಗಿ ಉಗಮಿಸಲು ಅಡಿಪಾಯವಾಯಿತು ಮತ್ತು ಸಾಟಿ ಪದ್ಧತಿಯ ಅನಾನುಕೂಲತೆಗಳು ಹಣದ ಕಾರ್ಯ ಮತ್ತು ಲಕ್ಷಣಗಳಲ್ಲಿ ಸಾಕಷ್ಟು ಪರಿಷ್ಕರಣೆಗೆ ಕಾರಣವಾಯಿತು.

**ಹಣದ ಕಾರ್ಯಗಳು:**

ವಿನಿಮಯ ಸಾಧನವಾಗಿ ಸಾರ್ವತ್ರಿಕ ಸ್ವೀಕಾರಾರ್ಹತೆ ಹೊಂದಿರುವ ವಸ್ತುವನ್ನು ಹಣವೆಂದು ನಾವು ತಿಳಿದುಕೊಂಡಿದ್ದೇವೆ. ಸಾರ್ವತ್ರಿಕ ಸ್ವೀಕಾರಾರ್ಹತೆಯ ಹೊರತಾಗಿ ಹಣವನ್ನು ಹಣವಾಗಿ ಕರೆಯಲಾಗುವುದಿಲ್ಲ. ಹಣದ ಪ್ರಮುಖ ಕಾರ್ಯಗಳನ್ನು ಪ್ರಾಥಮಿಕ ಅಥವಾ ಪ್ರಧಾನ ಕಾರ್ಯಗಳು, ದ್ವಿತೀಯಕ ಮತ್ತು ಪೂರಕ ಅಥವಾ ಅನುಷಂಗಿಕ ಕಾರ್ಯಗಳು ಎಂದು ವಿಂಗಡಿಸಲಾಗಿದೆ (ಚಿತ್ರ ನೋಡಿರಿ).



ಹಣದ ಕಾರ್ಯಗಳು

1. ಪ್ರಾಥಮಿಕ ಕಾರ್ಯಗಳು
    a. ವಿನಿಮಯ ಸಾಧನೆ
    b. ಮೌಲ್ಯ ನಿರ್ಣಯದ ಸಾಧನೆ
2. ಮಾಧ್ಯಮಿಕ ಕಾರ್ಯಗಳು
    a. ವಿಳಂಬಿಕ ಪಾವತಿಯ ಅಧಾರ
    b. ಮೌಲ್ಯ ಸಂಗ್ರಹದ ಸಾದನ
    c. ಮೌಲ್ಯದ ವರ್ಗಾವಣೆ
3. ಮಾರಕ ಕಾರ್ಯಗಳು
    a. ಸಾಲದ ವ್ಯವಹಾರಕ್ಕೆ ಅಧಾರ
    b. ಬಂಡವಾಳದ ಉತ್ಪಾದಕತೆ ಹೆಚ್ಚಿಸುವುದು.

## ಪ್ರಾಥಮಿಕ ಕಾರ್ಯಗಳು:

'ಹಣವು ನಿರ್ವಹಿಸುವ ಮೂಲಭೂತ ಕಾರ್ಯಗಳನ್ನು ಪ್ರಾಥಮಿಕ ಕಾರ್ಯಗಳು ಎನ್ನುವರು. ಅವುಗಳೆಂದರೆ (1) ವಿನಿಮಯ ಮಾಧ್ಯಮ ಮತ್ತು (2) ಮೌಲ್ಯ ಮಾಪನದ ಸಾಧನ.

1. **ವಿನಿಮಯದ ಸಾಧನ:** ಇದು ಹಣದ ಪ್ರಾಥಮಿಕ ಮತ್ತು ಅಂತರ್ಗತ ಕಾರ್ಯವಾಗಿದೆ. ಹಣವು ಸರಕು ಮತ್ತು ಸೇವೆಗಳ ವಿನಿಮಯವನ್ನು ಸುಗಮಗೊಳಿಸುವುದು. ಹಣಕ್ಕೆ ಸಾರ್ವತ್ರಿಕ ಸ್ವೀಕಾರಾರ್ಹತೆ ಇರುವುದರಿಂದ ಹಣದ ನೆರವಿನಿಂದ ವಿನಿಮಯವು ನೆರವೇರುವುದು.
2. **ಮೌಲ್ಯ ನಿರ್ಣಯದ ಸಾಧನ:** ಹಣದ ಮೂಲಕ ಸರಕು ಮತ್ತು ಸೇವೆಗಳ ಬೆಲೆ / ಮೌಲ್ಯವನ್ನು ವ್ಯಕ್ತಪಡಿಸಲಾಗುವುದು. ಆದ್ದರಿಂದ, ಸರಕು ಮತ್ತು ಸೇವೆಗಳ ಮೌಲ್ಯವನ್ನು ಅಳತೆ ಮಾಡಿ ಮಾರಾಟ ಮತ್ತು ಕೊಳ್ಳುವಿಕೆಗಾಗಿ ಹಣದ ರೂಪದಲ್ಲಿ ಅದನ್ನು ವ್ಯಕ್ತಪಡಿಸಲಾಗುತ್ತದೆ. ಇದು ಜನರಿಗೆ ಖರೀದಿಗೆ ಮುನ್ನ ಸರಕು ಮತ್ತು ಸೇವೆಗಳ ಮೌಲ್ಯವನ್ನು ಹೋಲಿಕೆ ಮಾಡಲು ನೆರವಾಗುತ್ತದೆ.

## ದ್ವಿತೀಯ ಕಾರ್ಯಗಳು:

1. **ವಿಳಂಬಿತ ಪಾವತಿಯ ಆಧಾರ:** ವಿಳಂಬ ಪಾವತಿಯೆಂದರೆ ಸರಕನ್ನು ಕೊಂಡ ಸಮಯದಲ್ಲೇ ಪಾವತಿಸದೇ ಭವಿಷ್ಯದ ದಿನಾಂಕದಂದು ಪಾವತಿಸುವುದಾಗಿದೆ. ಹಣವನ್ನು ದೀರ್ಘ ಸಮಯದವರೆಗೆ ಅದರ ಮೌಲ್ಯದಲ್ಲಿ ನಷ್ಟವಾಗದೇ ಇಟ್ಟುಕೊಳ್ಳಲು ಸಾಧ್ಯವಿರುವುದರಿಂದ ಇದನ್ನು ಭವಿಷ್ಯದ ಪಾವತಿಗೆ ಬಳಸಬಹುದಾಗಿದೆ.
2. **ಮೌಲ್ಯ ಸಂಗ್ರಹದ ಸಾಧನ:** ಹಣವು ಒಂದು ಸರಕಾಗಿ ನಾಶವಾಗುವುದಿಲ್ಲ. ಆದ್ದರಿಂದ ಹಣವನ್ನು ದೀರ್ಘಕಾಲದವರೆಗೆ ಮೌಲ್ಯದಲ್ಲಿ ನಷ್ಟವಾಗದೆ ಹಾಗೆ ಸಂಗ್ರಹಿಸಿಡಬಹುದು.

3. **ಮೌಲ್ಯದ ವರ್ಗಾವಣೆ:** ಹಣವು ಸರಕು ಮತ್ತು ಸೇವೆಗಳ ಮೌಲ್ಯವನ್ನು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಮತ್ತು ವ್ಯಕ್ತಿಯಿಂದ ವ್ಯಕ್ತಿಗೆ ವರ್ಗಾಯಿಸಲು ನೆರವಾಗುತ್ತದೆ. ಒಂದು ಸ್ಥಳದಲ್ಲಿನ ಸರಕು ಮತ್ತು ಸೇವೆಗಳನ್ನು ಹಣಕ್ಕೆ ಮಾರಿ ಅದನ್ನು ಬೇರೆ ಸ್ಥಳಕ್ಕೆ ವರ್ಗಾಯಿಸುವ ಮೂಲಕ ಮೌಲ್ಯವನ್ನು ವರ್ಗಾಯಿಸಬಹುದು.

## ಪೂರಕ ಕಾರ್ಯಗಳು:

1. **ಸಾಲದ ವ್ಯವಹಾರಕ್ಕೆ ಆಧಾರ:** ಹಣವು ಸಾಲದ ಕೊಡುವಿಕೆ ಮತ್ತು ಕೊಳ್ಳುವಿಕೆಯನ್ನು ಸುಗಮಗೊಳಿಸುವುದು. ಇದು ಸಾಲವನ್ನು ಬಡ್ಡಿಯ ಸಹಿತ ಮರುಪಾವತಿಸಲು ನೆರವಾಗುವುದು. ಒಂದು ನಿರ್ದಿಷ್ಟ ಸಮಯಕ್ಕೆ ನಿಖರವಾಗಿ ಮರುಪಾವತಿಸಬೇಕಾದ ಮೊತ್ತವನ್ನು ಸುಲಭ ಮತ್ತು ನಿಖರವಾಗಿ ಲೆಕ್ಕಾಚಾರ ಮಾಡಲು ನೆರವಾಗುವುದು.
2. **ಬಂಡವಾಳದ ಉತ್ಪಾದಕತೆಯನ್ನು ಹೆಚ್ಚಿಸುವುದು:** ಹಣವು ಆರ್ಥಿಕತೆಯಲ್ಲಿ ಬಳಸಲ್ಪಡುತ್ತಿರುವ ಅತ್ಯಂತ ದ್ರವ್ಯತೆಯುಳ್ಳ ಆಸ್ತಿಯಾಗಿದೆ. ಇದನ್ನು ಬೇರೆ ಯಾವುದೇ ಆಸ್ತಿಗೂ ಪರಿವರ್ತಿಸಬಹುದು ಅಥವಾ ಯಾವುದೇ ಆಸ್ತಿಯನ್ನು ಹಣಕ್ಕೆ ಸುಲಭವಾಗಿ ಪರಿವರ್ತಿಸಬಹುದು. ಅಂದರೆ ಹಣವು ಬಂಡವಾಳವನ್ನು ಕಡಿಮೆ ಉತ್ಪಾದಕತೆಯ ಬಳಕೆಯಿಂದ ಹೆಚ್ಚು ಉತ್ಪಾದಕತೆಯ ಬಳಕೆಗೆ ಪರಿವರ್ತಿಸಲು ನೆರವಾಗುವುದು.

## ಉತ್ತಮ ಹಣದ ಲಕ್ಷಣಗಳು:

ಹಣವು ಎಲ್ಲರ ಜೀವನದಲ್ಲೂ ಪ್ರಮುಖ ಪಾತ್ರ ವಹಿಸುತ್ತದೆ. ಹಣವು ಆಧುನಿಕ ಆರ್ಥಿಕತೆಯ ಜೀವನಾಡಿಯಾಗಿದೆ. ಹಣವಿಲ್ಲದೇ ಆರ್ಥಿಕತೆ ಸುಗಮವಾಗಿ ಕಾರ್ಯನಿರ್ವಹಿಸಲು ಸಾಧ್ಯವಿಲ್ಲ. ಹಣವು ಕಾಲಾಂತರದಲ್ಲಿ ತನ್ನ ಲಕ್ಷಣಗಳಲ್ಲಿ ಬದಲಾವಣೆ ಹೊಂದುತ್ತಾ ವಿಕಸನಗೊಂಡಿದೆ. ಈ ಬದಲಾವಣೆಗಳ ಹೊರತಾಗಿಯೂ ಉತ್ತಮ ಹಣ ಎನ್ನಲು ಕೆಲವು ಪ್ರಮುಖ ಲಕ್ಷಣಗಳನ್ನು ಹೊಂದಿರುವ ಅವಶ್ಯಕತೆ ಇದೆ. ಅವುಗಳಲ್ಲಿ ಕೆಲ ಪ್ರಮುಖ ಲಕ್ಷಣಗಳೆಂದರೆ:

1. **ಸಾರ್ವತ್ರಿಕ ಸ್ವೀಕಾರಾರ್ಹತೆ:** ಹಣದ ಅತ್ಯಂತ ಪ್ರಮುಖ ಲಕ್ಷಣವೆಂದರೆ ಸಾರ್ವತ್ರಿಕ ಸ್ವೀಕಾರಾರ್ಹತೆಯಾಗಿದೆ. ಹಣವನ್ನು ಅದರ ಉಪಯುಕ್ತತೆ ಮತ್ತು ತುಷ್ಟಿಗುಣದಿಂದಾಗಿ ಎಲ್ಲರೂ ಒಪ್ಪಿಕೊಳ್ಳುತ್ತಾರೆ. ಹಣವನ್ನು ದೈನಂದಿನ ವ್ಯವಹಾರಗಳಿಗಲ್ಲದೇ, ಭವಿಷ್ಯದ ವ್ಯವಹಾರಗಳಿಗೂ ಬಳಸುವರು.
2. **ಸಾಗಾಟ:** ಹಣದ ಸುಲಭ ಸಾಗಟ ಸಾಧ್ಯವಿರಬೇಕು. ಸುಗಮ ವಾಣಿಜ್ಯ ವ್ಯವಹಾರಕ್ಕೆ ಹಣವು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಸುಲಭವಾಗಿ ಸಾಗಟವಾಗುವಂತಿರಬೇಕು. ಅದು ಕಡಿಮೆ ತೂಕ ಇದ್ದು, ಗಾತ್ರವು ನಿರ್ವಹಿಸಲು ಸಾಧ್ಯವಾಗುವಷ್ಟಿರಬೇಕು. ಉದಾಹರಣೆ ಕಾಗದದ ನೋಟುಗಳು ಸಾಗಾಣಿಕೆಗೆ ಸುಲಭವಾಗಿದೆ.

3. **ಬಾಳಿಕೆ ಬರುವಿಕೆ:** ಹಣವು ಬಾಳಿಕೆ ಬರಬೇಕು. ದೀರ್ಘಕಾಲಿಕ ಬಾಳಿಕೆಗಾಗಿ ಇದನ್ನು ಉತ್ತಮ ಗುಣಮಟ್ಟದ ಲೋಹದಿಂದ ತಯಾರಿಸಬೇಕು. ಹಣವು ತನ್ನ ಚಲಾವಣೆಯ ಅವಧಿಯಲ್ಲಿ ಹಲವು ಸಂಖ್ಯೆಯ ವ್ಯವಹಾರವನ್ನು ನಿರ್ವಹಿಸಬೇಕು. ಕೆಲ ಸಮಯದಲ್ಲಿಯೇ ಆ ಸಲಕರಣೆಯ ಗುಣಮಟ್ಟದಲ್ಲಿ ಇಳಿಮುಖವಾಗಬಾರದು. ಉದಾಹರಣೆ ಕಾಗದದ ನೋಟುಗಳಿಗೆ ಹೋಲಿಸಿದರೆ ನಾಣ್ಯಗಳು ಹೆಚ್ಚು ಬಾಳಿಕೆ ಬರುತ್ತವೆ.
4. **ಮೌಲ್ಯದಲ್ಲಿನ ಸ್ಥಿರತೆ:** ಹಣದ ಮೌಲ್ಯವು ಸಾಪೇಕ್ಷವಾಗಿ ಸ್ಥಿರವಾಗಿರಬೇಕು. ಹಣದ ಮೌಲ್ಯದಲ್ಲಿನ ಪದೇ ಪದೇ ಬದಲಾವಣೆಯು ಆರ್ಥಿಕತೆಯನ್ನು ಅಸ್ಥಿರಗೊಳಿಸುವುದು ಮತ್ತು ಹಣದುಬ್ಬರ, ಹಣದ ಇಳಿತ ಅಥವಾ ಹಣಕಾಸಿನ ಬಿಕ್ಕಟ್ಟಿನಂತಹ ಆರ್ಥಿಕ ಸಮಸ್ಯೆಗಳನ್ನು ಸೃಷ್ಟಿಸುವುದು.

5. **ವಿಭಜನೀಯತೆ:** ಹಣವು ತನ್ನ ಮೌಲ್ಯವನ್ನು ಕಳೆದುಕೊಳ್ಳದೇ ಸಣ್ಣ ಘಟಕಗಳಾಗಿ ವಿಭಜನೆಯಾಗುವಂತಿರಬೇಕು. ಇದು ಜನರು ತಮ್ಮ ಅಗತ್ಯಗಳಿಗೆ ತಕ್ಕ ಹಾಗೆ ಸಣ್ಣ ಪ್ರಮಾಣದಲ್ಲಿ ಸರಕು ಮತ್ತು ಸೇವೆಗಳನ್ನು ಕೊಳ್ಳಲು ನೆರವಾಗುವುದು. ಉದಾಹರಣೆ ರೂ. 100 ನ್ನು 10 ರೂಪಾಯಿ 10 ಘಟಕಗಳಾಗಿ ವಿಭಜಿಸಬಹುದು.
6. **ಗುರುತಿಸುವಿಕೆ:** ಹಣದ ವಿವಿಧ ಘಟಕಗಳು ವಿವಿಧ ಲಕ್ಷಣವನ್ನು ಹೊಂದಿದೆ. ಉದಾಹರಣೆ ಸುಲಭವಾಗಿ ಗುರುತಿಸಲು ಗಾತ್ರ, ಬಣ್ಣ, ವಿನ್ಯಾಸ ಮತ್ತು ವಿಶೇಷವಾದ

ಭದ್ರತಾ ಲಕ್ಷಣಗಳನ್ನು ಹೊಂದಿರಬೇಕು. ಈ ಲಕ್ಷಣಗಳು ಜನರಿಗೆ ನಿರ್ದಿಷ್ಟ ಹಣದ ಘಟಕವಾಗಿ ಗುರುತಿಸಲು ಮತ್ತು ಅನುಮಾನಗಳಿಲ್ಲದೇ ವ್ಯವಹರಿಸಲು ನೆರವಾಗುತ್ತದೆ.

7. **ಕೊರತೆ ಪೂರೈಕೆ:** ಹಣವು ತನ್ನ ಪೂರೈಕೆಯಲ್ಲಿ ಮಿತವಾಗಿರುತ್ತದೆ. ಅಂದರೆ ಹಣದ ಬೇಡಿಕೆಗಿಂತ ಅದರ ಪೂರೈಕೆ ಕಡಿಮೆ ಇರಬೇಕು. ಇದು ಹಣದ ಮೌಲ್ಯದಲ್ಲಿ ಸ್ಥಿರತೆ ಕಾಪಾಡಲು ನೆರವಾಗುತ್ತದೆ, ಇದು ಹಣವನ್ನು ಅತ್ಯಮೂಲ್ಯ ಮತ್ತು ಅಪೂರ್ವವಾಗಿಸಿದೆ.
8. **ಸುಲಭವಾಗಿ ನಕಲಿ ಕರೆನ್ಸಿ ಮಾಡಲು ಸಾಧ್ಯವಾಗಬಾರದು:** ಒಳ್ಳೆಯ ಹಣವು ಉನ್ನತ ಮಟ್ಟದ ಭದ್ರತಾ ಲಕ್ಷಣಗಳನ್ನು ಹೊಂದಿರುವುದು ಮತ್ತು ನಕಲಿ ಕರೆನ್ಸಿಯ ಸೃಷ್ಟಿಯು ತೀರ ಕಷ್ಟಕರವಾಗಿರುತ್ತದೆ.

9. **ಪರಿಣಾಮಕಾರಿ ಮೇಲ್ವಿಚಾರಣೆ:** ಕೇಂದ್ರ ಬ್ಯಾಂಕಿನಿಂದ ಪರಿಣಾಮಕಾರಿಯಾಗಿ ಮೇಲ್ವಿಚಾರಣೆಗೆ ಒಳಪಟ್ಟಿರುವ ಹಣವು ಉತ್ತಮ/ ಒಳ್ಳೆಯ ಹಣವಾಗಿದೆ. ಕೇಂದ್ರ ಬ್ಯಾಂಕು ಚಲಾವಣೆಯಲ್ಲಿರುವ, ಹಂಚಿಕೆಯಾಗಿರುವ ಮಾದರಿ ಮೇಲೆ, ಹಣದ ಮೇಲೆ ಸದಾ ನಿಗಾ ಇಟ್ಟಿರಬೇಕು.

## ಅಭ್ಯಾಸ

**I. ಈ ಕೆಳಗಿನ ಪ್ರಶ್ನೆಗಳಿಗೆ ನಾಲ್ಕು ಪರ್ಯಾಯ ಉತ್ತರಗಳನ್ನು ಕೊಡಲಾಗಿದೆ ಅವುಗಳಲ್ಲಿ ಸೂಕ್ತವಾದ ಉತ್ತರವನ್ನು ಆರಿಸಿ ಬರೆಯಿರಿ.**

ವು ಏನನ್ನು ಮಾಡುವುದೋ ಅದೇ ಹಣ ಎಂದು ಹೇಳಿದವರು ________

ಅ) ಪ್ರೊ. ವಾಕರ್
ಆ) ಪ್ರೊ. ಸೆಲಿಗ್‌ಮನ್
ಇ) ಆಡಂಸ್ಮಿತ್
ಈ) ಸರ್ ಜೇಮ್ಸ್ ಟೇಲರ್

ವು ನಿರ್ವಹಿಸುವ ಮೂಲ ಕಾರ್ಯಗಳನ್ನು ________ ಕಾರ್ಯಗಳು ಎನ್ನುವರು.

ಅ) ಪ್ರಾಥಮಿಕ
ಆ) ಮಾಧ್ಯಮಿಕ
ಇ) ಪೂರಕ
ಈ) ಮೇಲಿನ ಎಲ್ಲಾ

: ಜನವರಿ ________ ಇಸಿವಿಯಲ್ಲಿ ಆರ್.ಬಿ.ಐ.ನ್ನು ರಾಷ್ಟ್ರೀಕರಣಗೊಳಿಸಿದರು.

ಅ) 1947
ಆ) 1949

ಇ) 1950
ಈ) 1969

____ ರಲ್ಲಿ ಭಾರತದಲ್ಲಿ ಕಾಗದ ಹಣದ ಕಾಯ್ದೆಯನ್ನು ಜಾರಿಗೊಳಿಸಲಾಯಿತ್ತು.

ಅ) 1850
ಆ) 1861
ಇ) 1949
ಈ) 1961

ವ ಬಳಕೆಯಿಲ್ಲದೇ ಸರಕುಗಳಿಗೆ ಸರಕನ್ನು ವಿನಿಮಯಿಸುವುದನ್ನು ________ ಎನ್ನುವರು

ಅ) ಸಾಟಿ ಪದ್ಧತಿ
ಆ) ಎಲೆಕ್ಟ್ರಾನಿಕ್ ಪದ್ಧತಿ
ಇ) ಬ್ಯಾಂಕು ವ್ಯವಸ್ಥೆ
ಈ) ಮೇಲಿನ ಯಾವುದೂ ಅಲ್ಲ

**II. ಈ ಕೆಳಗಿನ ವಾಕ್ಯಗಳಲ್ಲಿ ಖಾಲಿ ಬಿಟ್ಟ ಸ್ಥಳಗಳನ್ನು ತುಂಬಿರಿ.**

1. ಹಣವು _______ ಮತ್ತು ವಿನಿಮಯದ ಪ್ರಕ್ರಿಯೆಯನ್ನು ಸುಲಭಗೊಳಿಸುವುದು.
2. ಭಾರತೀಯ ಕೇಂದ್ರ ಬ್ಯಾಂಕನ್ನು 1 ನೇ ಏಪ್ರಿಲ್ 1935 ರಂದು _______ ಲ್ಲಿ ಸ್ಥಾಪನೆಗೊಂಡಿತು.
3. ಪ್ಲಾಸ್ಟಿಕ್ ಹಣವೆಂದರೆ ಎಲ್ಲ ವಿಧದ _______
4. ಸರಕನ್ನು ಕೊಂಡುಕೊಂಡ ಸಮಯದಲ್ಲಿ ಪಾವತಿ ಮಾಡದೇ ಭವಿಷ್ಯದ ದಿನಾಂಕದಂದು ಪಾವತಿಸುವುದನ್ನು _______ ಪಾವತಿ ಎಂದು ಕರೆಯುತ್ತಾರೆ.
5. ಆರ್. ಬಿ. ಐ. ಮೊದಲು ಐದು ರೂಪಾಯಿ ನೋಟನ್ನು ಚಲಾವಣೆಗೆ ತಂದ ವರ್ಷ _______

**III. ಈ ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

1. ಹಣ ಎಂದರೇನು?
2. ಲೋಹದ ಹಣದಲ್ಲಿ ಬಳಸಿರುವ ಎರಡು ಲೋಹವನ್ನು ಹೆಸರಿಸಿ.
3. ಸಾಟಿ ಪದ್ಧತಿಯ ಅರ್ಥವೇನು?
4. ಆರ್. ಬಿ. ಐ. ನ್ನು ವಿಸ್ತರಿಸಿ ಬರೆಯಿರಿ.

5. ಹಣದ ಪ್ರಮುಖ ಕಾರ್ಯಗಳು ಯಾವುವು?

**IV. ಈ ಕೆಳಗಿನ ಪ್ರಶ್ನೆಗಳಿಗೆ ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿ**

1. ಸಾಟಿ ಪದ್ಧತಿಯ ನಂತರ ಹಣದ ವಿಕಸನದ ಪ್ರಮುಖ ಹಂತಗಳನ್ನು ಪಟ್ಟಿ ಮಾಡಿ.
2. ಸರಕಿನ ರೂಪದ ಹಣ ಎಂದರೇನು?
3. ಹಣವು ನಿರ್ವಹಿಸುವ ಮೂಲ ಕಾರ್ಯಗಳನ್ನು ಹೆಸರಿಸಿ.
4. ಸಾಟಿ ಪದ್ಧತಿಯ ಯಾವುದಾದರೂ ಎರಡು ಅನುಕೂಲತೆಗಳನ್ನು ಬರೆಯಿರಿ.
5. ಉತ್ತಮ ಹಣದ ಎರಡು ಲಕ್ಷಣಗಳನ್ನು ಹೆಸರಿಸಿ.

**V. ಈ ಕೆಳಗಿನ ಪ್ರಶ್ನೆಗಳಿಗೆ ಎಂಟು ವಾಕ್ಯಗಳಲ್ಲಿ ಉತ್ತರಿಸಿ.**

1. ಸಾಟಿ ಪದ್ಧತಿಯ ಅನುಕೂಲತೆಗಳು ಮತ್ತು ಅನಾನುಕೂಲತೆಗಳನ್ನು ಸಂಕ್ಷಿಪ್ತವಾಗಿ ವಿವರಿಸಿ.
2. ಹಣದ ವಿವಿಧ ಪ್ರಕಾರಗಳ ಕುರಿತು ಟಿಪ್ಪಣಿ ಬರೆಯಿರಿ.
3. ಹಣದ ವಿವಿಧ ಕಾರ್ಯಗಳನ್ನು ಸಂಕ್ಷಿಪ್ತವಾಗಿ ವಿವರಿಸಿ.
4. ಅ) ಪ್ಲಾಸ್ಟಿಕ್ ಹಣ ಆ) ಕಾಗದ ಹಣದ ಕುರಿತು ಕಿರು ಟಿಪ್ಪಣಿ ಬರೆಯಿರಿ.
5. ಉತ್ತಮ ಹಣದ ಲಕ್ಷಣಗಳನ್ನು ಸಂಕ್ಷಿಪ್ತವಾಗಿ ವಿವರಿಸಿ.

**ನಿಯೋಜಿತ ಕಾರ್ಯ:**

ನಿಮ್ಮ ಅನುಭವಕ್ಕೆ ಬಂದಿರುವ ವಿವಿಧ ಪ್ರಕಾರದ ಪ್ಲಾಸ್ಟಿಕ್ ಹಣವನ್ನು ಪಟ್ಟಿ ಮಾಡಿರಿ.

ನಿಮ್ಮ ಜಿಲ್ಲೆಯಲ್ಲಿ ಸಾಟಿ ವಿನಿಮಯ ಪದ್ಧತಿಯನ್ನು ಬಳಸಿ ನಡೆಯುತ್ತಿರುವ ಸರಕುಗಳ ವಿನಿಯಮಕ್ಕೆ ಸಂಬಂಧಿಸಿದಂತೆ ಮಾಹಿತಿ ಸಂಗ್ರಹಿಸಿ ಬರೆಯಿರಿ.

## ಅಧ್ಯಾಯ-5: ಹಣದ ಮಾರುಕಟ್ಟೆ ಮತ್ತು ಬಂಡವಾಳ ಮಾರುಕಟ್ಟೆ

"ಹಣದ ಮಾರುಕಟ್ಟೆಯು ಅಲ್ಪಾವಧಿ ಸಾಲದ ಪರಿಕರಗಳ ಕೊಳ್ಳುವಿಕೆ, ಮಾರಾಟ ಮತ್ತು ವರ್ಗಾವಣೆಯನ್ನು ನಿರ್ವಹಿಸುವ ಹಣಕಾಸಿನ ಸಂಸ್ಥೆಗಳನ್ನು ನಿರ್ದಿಷ್ಟವಾಗಿ ಸೂಚಿಸುತ್ತದೆ. ಹಣದ ಮಾರುಕಟ್ಟೆಯು ಅಲ್ಪಾವಧಿ ನಿಧಿಯ ಹರಿವನ್ನು ನಿರ್ವಹಿಸುವ ಒಟ್ಟಾರೆ ಸಂಘಟನೇ ರಚನೆಯನ್ನು ಒಳಗೊಳ್ಳುವುದು. ಇದು ಪ್ರಾಥಮಿಕವಾಗಿ ಸಣ್ಣ ಉದ್ಯಮಗಳ ಅಗತ್ಯಗಳಾದ ಕಾರ್ಯನಿರ್ವಹಣೆ ಬಂಡವಾಳ, ವೈಯಕ್ತಿಕ ಸಾಲ ಮತ್ತು ಸರ್ಕಾರದ ಅಲ್ಪಾವಧಿ ಜವಾಬಾರಿಗೆ ಸಂಬಂಧಿಸಿದಾಗಿದ್ದು, ಇದು ಸಾಪತ್ರ, ಕಂಪನಿಗಳ ಪೇರು ಮತ್ತು ಅಡಮಾನದ ಸಾಲಗಳಿಗೆ ಹೆಚ್ಚಿನ ಗಮನ ನೀಡುವ ದೀರ್ಘಾವಧಿ ಅಥವಾ ಬಂಡವಾಳ ಮಾರುಕಟ್ಟೆಗಿಂತ ಭಿನ್ನವಾಗಿದೆ" ಮೆಕ ಗ್ರಾ ಹಿಲ್ ಆಧುನಿಕ ಅರ್ಥಶಾಸ್ತ್ರ ದ ನಿಘಂಟು

### ಪೀಠಿಕೆ:

ಹಣವನ್ನು ಆಧುನಿಕ ಆರ್ಥಿಕತೆಯ ಜೀವರಕ್ತ ಎಂದು ಪರಿಗಣಿಸಲಾಗಿದೆ. ಎಲ್ಲಾ ವ್ಯವಹಾರಗಳು ಹಣದ ಮಾಧ್ಯಮದ ಮೂಲಕ ನಿರ್ವಹಿಸಲ್ಪಡುತ್ತದೆ. ದಿನನಿತ್ಯದ ಅಗತ್ಯತೆಗಳನ್ನು ಈಡೇರಿಸಿಕೊಳ್ಳಲು ಅಗತ್ಯವಾದ ಹಣದ ಆದಾಯವನ್ನು ಗಳಿಸಲು ಪ್ರತಿಯೊಬ್ಬ ವ್ಯಕ್ತಿಯು ಪರಿಶ್ರಮಿಸುತ್ತಾನೆ. ಹಣವು ಅನುಭೋಗ ಮತ್ತು ಹೂಡಿಕೆಯ ಅಗತ್ಯತೆಗಳನ್ನು ಪೂರೈಸಿಕೊಳ್ಳಲು ಅತ್ಯಗತ್ಯವಾಗಿದೆ. ಹಾಗಾಗಿ ಭವಿಷ್ಯದಲ್ಲಿ ಹೆಚ್ಚು ಹಣ ಗಳಿಸುವ ದೃಷ್ಟಿಯಿಂದ ಹಣವನ್ನು ಹೂಡಿಕೆ ಮಾಡಲಾಗುತ್ತದೆ. ಇದು ಕೆಲ ವ್ಯಕ್ತಿಗಳ ಬಳಿ ಅಧಿಕ ಹಣವಿದ್ದು, ಅದು ಅಗತ್ಯವಿದ್ದವರಿಗೆ ವಿವಿಧ ಉದ್ದೇಶಗಳಿಗೆ ಸಾಲ ನೀಡಲು ಸಿದ್ಧರಿದ್ದಾರೆ ಎಂಬುದನ್ನು ಸೂಚಿಸುತ್ತದೆ. ಹಾಗಾಗಿ ಸಾಲವನ್ನು ಪಡೆಯುವುದು ಮತ್ತು ಸಾಲವನ್ನು ನೀಡುವುದು ಸರಕು ಮತ್ತು ಸೇವೆಗಳ ಮಾರಾಟದಂತೆಯೇ ಸಾಮಾನ್ಯ ಸಂಗತಿಯಾಗಿದೆ. ಹಣಕ್ಕೆ ನಿರ್ದಿಷ್ಟ ಬೆಲೆ ಅಥವಾ ಬಡ್ಡಿಯನ್ನು ನೀಡುವ ಕಾರಣದಿಂದ ಹಣದ ಮಾರುಕಟ್ಟೆಯು ಅರ್ಥವ್ಯವಸ್ಥೆಯಲ್ಲಿ ಪ್ರಮುಖ ಅಂಗವಾಗಿದೆ. ಆದ್ದರಿಂದ ಹಣಕಾಸು ವಲಯವು ದೇಶದ ಆರ್ಥಿಕ ಅಭಿವೃದ್ಧಿಯಲ್ಲಿ ಅತ್ಯಂತ ಪ್ರಮುಖ ಪಾತ್ರವನ್ನು ನಿರ್ವಹಿಸುತ್ತದೆ ಎಂದು ಪರಿಗಣಿಸಲಾಗಿದೆ. ಹಣಕಾಸು ಮಾರುಕಟ್ಟೆಯ ಪ್ರಮುಖ ಉದ್ದೇಶವು ಹಣವನ್ನು ಸಾಲ ನೀಡುವವರಿಂದ ಸಾಲಗಾರರಿಗೆ ವರ್ಗಾವಣೆ ಮಾಡುವುದಾಗಿದೆ.

ಹಣದ ಮಾರುಕಟ್ಟೆ ಮತ್ತು ಬಂಡವಾಳ ಮಾರುಕಟ್ಟೆಗಳು ಹಣಕಾಸಿನ ಮಾರುಕಟ್ಟೆಯ ಎರಡು ಅಂಗಗಳಾಗಿವೆ. ಹಾಗಾದರೆ ಹಣದ ಮಾರುಕಟ್ಟೆ ಎಂದರೇನು? ಹಣದ ಮಾರುಕಟ್ಟೆಯ ಲಕ್ಷಣಗಳಾವುವು? ಹಣದ ಮಾರುಕಟ್ಟೆಯ ಪ್ರಮುಖ ಅಂಗಗಳಾವುವು? ಬಂಡವಾಳ ಮಾರುಕಟ್ಟೆ ಎಂದರೇನು? ಅವುಗಳ ಲಕ್ಷಣಗಳೇನು? ಬಂಡವಾಳ ಮಾರುಕಟ್ಟೆಯ ಅಂಗಗಳಾವುವು? ಈ ಅಧ್ಯಾಯದ ಅಧ್ಯಯನದ ನಂತರ ಈ

ಎಲ್ಲಾ ಪ್ರಶ್ನೆಗಳಿಗೆ ಉತ್ತರವನ್ನು ಹಾಗೂ ಹಣದ ಮತ್ತು ಬಂಡವಾಳ ಮಾರುಕಟ್ಟೆಯ ಇತರೆ ಪರಿಕಲ್ಪನೆಯನ್ನು ತಿಳಿದುಕೊಳ್ಳಲು ಸಹಕಾರಿಯಾಗಿದೆ.

## ಹಣದ ಮಾರುಕಟ್ಟೆ:

**ಅರ್ಥ:**

ಹಣದ ಮಾರುಕಟ್ಟೆಯೆಂದರೆ 'ಅಲ್ಪಾವಧಿಯ ಸಾಲದ ವ್ಯವಹಾರವನ್ನು ನಿರ್ವಹಿಸುವ ಮಾರುಕಟ್ಟೆಯಾಗಿದೆ'. ಇದು ಅಲ್ಪಾವಧಿ ಹಣಕಾಸಿನ ಆಸ್ತಿಗಳ ಮಾರುಕಟ್ಟೆಯಾಗಿದೆ. ಹಣವನ್ನು ಅಲ್ಪಾವಧಿಗಾಗಿ ಅಂದರೆ ಒಂದು ದಿನ, ವಾರ, ತಿಂಗಳು ಮತ್ತು ಗರಿಷ್ಟ ಒಂದು ವರ್ಷದವರೆಗೆ ಸಾಲವನ್ನು ಪಡೆಯಬಹುದಾಗಿದೆ.

ಹಣದ ಮಾರುಕಟ್ಟೆಯಲ್ಲಿ ವಿವಿಧ ಸಾಧನ ಪರಿಕರಗಳಾದ ಸರ್ಕಾರಿ ಸಾಲಪತ್ರಗಳು, ಖಜಾನೆ ಬಿಲ್ಲು, ವಿನಿಮಯ ಪತ್ರಗಳು, ಬ್ಯಾಂಕುಗಳ ಸಮ್ಮತಿ ಪತ್ರ ಇತ್ಯಾದಿಗಳ ಮೂಲಕ ವ್ಯವಹರಿಸಲಾಗುತ್ತದೆ. ಸಾಲಗಾರರು ಸಾಮಾನ್ಯವಾಗಿ ವರ್ತಕರು, ದಲ್ಲಾಳಿಗಳು, ವ್ಯಾಪಾರಿಗಳು, ಸಟ್ಟಾವ್ಯಾಪಾರಿಗಳು, ಉತ್ಪಾದಕರು ಮತ್ತು ಸರ್ಕಾರಿ ಸಂಸ್ಥೆಗಳು ಹಣದ ಮಾರುಕಟ್ಟೆಯಲ್ಲಿ ಸಾಲಗಾರರಾಗಿರುತ್ತಾರೆ. ಸಾಮಾನ್ಯವಾಗಿ ವಾಣಿಜ್ಯ ಬ್ಯಾಂಕುಗಳು, ವಿಮಾ ಕಂಪನಿಗಳು, ಬ್ಯಾಂಕೇತರ ಹಣಕಾಸಿನ ಸಂಸ್ಥೆಗಳು ಮತ್ತು ದೇಶದ ಕೇಂದ್ರ ಬ್ಯಾಂಕು ಹಣದ ಮಾರುಕಟ್ಟೆಯಲ್ಲಿ ಸಾಲದಾತರಾಗಿರುತ್ತಾರೆ.

### *ಹಣದ ಮಾರುಕಟ್ಟೆಯ ಲಕ್ಷಣಗಳು:*

ಹಣದ ಮಾರುಕಟ್ಟೆಯ ಪ್ರಮುಖ ಲಕ್ಷಣಗಳೆಂದರೆ:

1. ಹಣದ ಮಾರುಕಟ್ಟೆಯು ಅಲ್ಪಾವಧಿ ಸಾಲದ ವ್ಯವಹಾರಕ್ಕೆ ಸಂಬಂಧಿಸಿದ ಮಾರುಕಟ್ಟೆಯಾಗಿದೆ.
2. ಹಣದ ಸಾಲ ನೀಡಿಕೆ ಮತ್ತು ಕೊಳ್ಳುವಿಕೆಯ ವ್ಯವಹಾರಕ್ಕೆ ಒಂದು ನಿರ್ದಿಷ್ಟ ಸ್ಥಳದಲ್ಲಿ ಸಾಲದಾತ ಮತ್ತು ಸಾಲಗಾರನು ಪರಸ್ಪರ ಮುಖಾಮುಖಿ ಭೇಟಿಯಾಗುವ ಅಗತ್ಯವಿಲ್ಲ. ಇವರು ವ್ಯವಹಾರವನ್ನು ಹಲವು ಸಂಪರ್ಕ ಸಾಧನಗಳಾದ ದೂರವಾಣಿ, ಅಂತರ್ಜಾಲ, ಇ-ಮೇಲ್ ಇತ್ಯಾದಿಗಳ ಮೂಲಕ ನಿರ್ವಹಿಸಬಹುದು.
3. ಹಣದ ಮಾರುಕಟ್ಟೆಯು ಹಲವು ವಿಶೇಷ ಉಪಮಾರುಕಟ್ಟೆಗಳನ್ನು ಒಳಗೊಂಡಿರುತ್ತದೆ. ಉದಾಹರಣೆಗೆ ಕರೆ ಹಣದ ಮಾರುಕಟ್ಟೆ, ಭದ್ರತಾಪತ್ರ ಮಾರುಕಟ್ಟೆ, ರಿಯಾಯಿತಿ ಮಾರುಕಟ್ಟೆ, ಸಮ್ಮತಿ ಪತ್ರ ಮಾರುಕಟ್ಟೆ ಇತ್ಯಾದಿ.
4. ಹಣದ ಮಾರುಕಟ್ಟೆಯಲ್ಲಿ ದೊಡ್ಡ ಸಂಖ್ಯೆಯಲ್ಲಿ ಸಾಲದಾತರು ಮತ್ತು ಸಾಲಿಗರು ಇರುವರು. ಮತ್ತು ದೊಡ್ಡ ಪ್ರಮಾಣದಲ್ಲಿ ಅಲ್ಪಾವಧಿ ಸಾಲದ ವ್ಯವಹಾರವನ್ನು

ನಿರ್ವಹಿಸುವರು. ಇದೇ ಅಲ್ಪಾವಧಿ ಕಾರ್ಯನಿರ್ವಹಣಾ ಬಂಡವಾಳದ ಮೂಲವಾಗಿದೆ.

### *ಹಣದ ಮಾರುಕಟ್ಟೆಯ ಪರಿಕರಗಳು:*

ಹಣದ ಮಾರುಕಟ್ಟೆಯ ಪ್ರಮುಖ ಪರಿಕರಗಳೆಂದರೆ

1. ಖಜಾನೆ ಹುಂಡಿಗಳು
2. ಠೇವಣಿ ಪ್ರಮಾಣ ಪತ್ರಗಳು
3. ವಾಣಿಜ್ಯ ಪತ್ರಗಳು ಮತ್ತು
4. ಬ್ಯಾಂಕುಗಳ ಸಮ್ಮತಿ ಪತ್ರ ಇತ್ಯಾದಿ.

ಈಗ ಪ್ರತಿಯೊಂದನ್ನು ವಿವರವಾಗಿ ಚರ್ಚಿಸೋಣ.

**1) ಖಜಾನೆ ಹುಂಡಿಗಳು:**

ಖಜಾನೆ ಬಿಲ್ಲು ಅಥವಾ ಹುಂಡಿಗಳನ್ನು ಸರ್ಕಾರವು ನೀಡುವುದರಿಂದ ಇದು ಅತ್ಯಂತ ಸುರಕ್ಷಿತವಾದ ಹಣದ ಮಾರುಕಟ್ಟೆಯ ಪರಿಕರವಾಗಿದೆ. ಖಜಾನೆ ಹುಂಡಿಗಳು ವಿಭಿನ್ನ ಅವಧಿಗೆ ಲಭ್ಯವಿದೆ. 45 ದಿನಗಳು, 90 ದಿನಗಳು, 180 ದಿನಗಳು ಮತ್ತು 1 ವರ್ಷವಾಗಿವೆ. ಈ ಪರಿಕರಗಳು ಶೂನ್ಯ ಗಂಡಾಂತರ ಹೊಂದಿರುವುದರಿಂದ ಬಡ್ಡಿ ಅಥವಾ ಪ್ರತಿಫಲವು ಕಡಿಮೆ ಇರುವುದು. ಖಜಾನೆ ಹುಂಡಿಗಳ ಕೊಳ್ಳುವ ಬೆಲೆ ಅಥವಾ ಮೌಲ್ಯವನ್ನು ಹರಾಜಿನ ಮೂಲಕ ನಿರ್ಧರಿಸಲಾಗುತ್ತದೆ. ಭಾರತ ಸರ್ಕಾರವು ಪ್ರಸ್ತುತ ಮೂರು ವಿಧದ ಖಜಾನೆ ಹುಂಡಿಗಳನ್ನು ಹರಾಜು ಮಾಡುತ್ತದೆ. ಅವುಗಳೆಂದರೆ 91 ದಿನ, 182 ದಿನ ಮತ್ತು 364 ದಿನಗಳಾಗಿವೆ.

**2) ಠೇವಣಿ ಪ್ರಮಾಣ ಪತ್ರಗಳು:**

ಠೇವಣಿ ಪ್ರಮಾಣ ಪತ್ರಗಳು ಬ್ಯಾಂಕುಗಳು ಹೊರಡಿಸುವ ವಾಗ್ದಾನ ಪತ್ರ ಅಥವಾ ಉಳಿತಾಯದ ಪ್ರಮಾಣ ಪತ್ರಗಳಾಗಿವೆ. ಇವುಗಳನ್ನು ಹೊಂದಿದವರಿಗೆ ವಾಯಿದೆ ಅಥವಾ ಅವಧಿಯ ನಂತರ ನಿರ್ದಿಷ್ಟ ಬಡ್ಡಿಯು ದೊರೆಯುವುದು. ಈ ಪ್ರಮಾಣ ಪತ್ರಗಳನ್ನು ಯಾವುದೇ ಮೌಲ್ಯದಲ್ಲಿ ವಿತರಿಸಬಹುದು ಮತ್ತು ಇದರ ಅವಧಿ ಮೂರು ತಿಂಗಳಿನಿಂದ 5 ವರ್ಷಗಳಾಗಿರುತ್ತವೆ. ಠೇವಣಿ ಪ್ರಮಾಣ ಪತ್ರಗಳು ಖಜಾನೆ ಹುಂಡಿಗಳಿಗಿಂತ ಹೆಚ್ಚಿನ ಆದಾಯ ಗಳಿಸುತ್ತವೆ. ಠೇವಣಿ ಪ್ರಮಾಣ ಪತ್ರಗಳು 1) ಠೇವಣಿಯ ಮೊತ್ತ 2) ಠೇವಣಿಯ ಪರಿಪಕ್ವತೆಯ ಅವಧಿ 3) ಬಡ್ಡಿಯ ದರ 4) ಬಡ್ಡಿಯ ದರವನ್ನು ಲೆಕ್ಕಚಾರ ಮಾಡುವ ವಿಧಾನದ ಮಾಹಿತಿಯನ್ನು ಹೊಂದಿರುತ್ತದೆ.

**3) ವಾಣಿಜ್ಯ ಪತ್ರಗಳು:**

ವಾಣಿಜ್ಯ ಪತ್ರಗಳು ಕಂಪನಿಗಳು ಮತ್ತು ಹಣಕಾಸಿನ ಸಂಸ್ಥೆಗಳು ವಿತರಿಸುವ ಸುರಕ್ಷಿತವಲ್ಲದ ಅಲ್ಪಾವಧಿ ವಾಗ್ದಾನ ಪತ್ರಗಳಾಗಿವೆ. ಇವುಗಳ ಪರಿಪಕ್ವತೆಯ ಅವಧಿಯು ಒಂದು ದಿನದಿಂದ 270 ದಿನಗಳವರೆಗೆ ವ್ಯತ್ಯಾಸವಾಗುತ್ತದೆ. ಇದನ್ನು ಅಲ್ಪಾವಧಿ ಹಣಕಾಸಿನ ಅಗತ್ಯತೆಗಳ ಈಡೇರಿಕೆಗೆ ಬಳಸಲಾಗುವುದು. ವಾಣಿಜ್ಯ ಪತ್ರಗಳ ಗಳಿಕೆಯು ಖಜಾನೆ ಬಿಲ್ಲುಗಳಿಗಿಂತ ಹೆಚ್ಚಾಗಿರುತ್ತದೆ. ಆದರೆ, ಖಜಾನೆ ಬಿಲ್ಲು ಮತ್ತು ಠೇವಣಿ ಪ್ರಮಾಣ ಪತ್ರಗಳಿಗಿಂತ ಕಡಿಮೆ ಭದ್ರತೆಯನ್ನು ಹೊಂದಿದೆ.

### 4) ಬ್ಯಾಂಕುಗಳ ಸಮ್ಮತಿ ಪತ್ರ:

ಬ್ಯಾಂಕುಗಳ ಸಮ್ಮತಿ ಪತ್ರವು ಹಣಕಾಸೇತರ ಸಂಸ್ಥೆಗಳು ಸೃಷ್ಟಿಸಿರುವ ಅಲ್ಪಾವಧಿ ಸಾಲ ಪರಿಕರಗಳಾಗಿದ್ದು, ಇವುಗಳಿಗೆ ಬ್ಯಾಂಕುಗಳ ಸಮ್ಮತಿ ಅಥವಾ ಖಾತರಿಯಿರುತ್ತದೆ. ಇದರಲ್ಲಿ ವಿನಿಮಯ ಪತ್ರದ ಹಾಗೆಯೇ ಕೊಂಡುಕೊಳ್ಳುವವನು ಮಾರಾಟಗಾರನಿಗೆ ನಿರ್ದಿಷ್ಟ ಮೊತ್ತವನ್ನು ನಿರ್ದಿಷ್ಟ ಭವಿಷ್ಯದ ದಿನಾಂಕದಂದು ಪಾವತಿಸುವ ವಾಗ್ದಾನವಿದ್ದು, ಇದು ಬ್ಯಾಂಕಿನ ಖಾತರಿ ವಾಗ್ದಾನವನ್ನು ಹೊಂದಿರುವುದು. ಈ ಭದ್ರತೆಗಳು 30 ದಿನಗಳು, 90 ದಿನಗಳು ಮತ್ತು 180 ದಿನಗಳ ಪರಿಪಕ್ವತೆಯ ಅವಧಿ ಹೊಂದಿರುತ್ತದೆ. ಸಾಮಾನ್ಯವಾಗಿ ಬ್ಯಾಂಕುಗಳ ಸಮ್ಮತಿ ಪತ್ರವು 90 ದಿನಗಳ ಪರಿಪಕ್ವತೆ ಅವಧಿ ಹೊಂದಿರುತ್ತದೆ. ಇದು ಸಾಮಾನ್ಯವಾಗಿ ವ್ಯಾಪಾರ, ಅದರಲ್ಲೂ ಅಂತರಾಷ್ಟ್ರೀಯ ವ್ಯಾಪಾರದ ಸನ್ನಿವೇಶದಲ್ಲಿ ಉದ್ಭವಿಸುತ್ತದೆ.

## ಬಂಡವಾಳ ಮಾರುಕಟ್ಟೆ:

ಬಂಡವಾಳ ಮಾರುಕಟ್ಟೆಯು ಸಂಪನ್ಮೂಲಗಳನ್ನು ಕ್ರೋಢೀಕರಿಸುವ ಮತ್ತು ಅವುಗಳನ್ನು ವಾಣಿಜ್ಯ ಮತ್ತು ಕೈಗಾರಿಕೆಗಳ ಉತ್ಪಾದಕ ಉದ್ದೇಶಗಳಿಗೆ ಪ್ರವಹಿಸುವಂತೆ ಮಾಡುವಲ್ಲಿ ನಿರ್ಣಾಯಕ ಪಾತ್ರವಹಿಸುತ್ತದೆ. ಹಾಗಾಗಿ ಬಂಡವಾಳ ಮಾರುಕಟ್ಟೆಯು ಆರ್ಥಿಕ ಬೆಳವಣಿಗೆಯ ಪ್ರಕ್ರಿಯೆಯನ್ನು ಸುಗಮಗೊಳಿಸುವ ಮೂಲಕ ಪ್ರೋತ್ಸಾಹಿಸುತ್ತದೆ.

**ಅರ್ಥ:** ಬಂಡವಾಳ ಮಾರುಕಟ್ಟೆಯು ದೀರ್ಘಾವಧಿ ಸಾಲದ ವ್ಯವಹಾರವನ್ನು ನಿರ್ವಹಿಸುವ ಮಾರುಕಟ್ಟೆಯಾಗಿದೆ. ಬಂಡವಾಳ ಮಾರುಕಟ್ಟೆಯೆಂದರೆ ದೀರ್ಘಾವಧಿ ನಿಧಿಯನ್ನು ಪರಿಣಾಮಕಾರಿಯಾಗಿ

ಸಂಗ್ರಹಿಸಿ ಹೂಡಿಕೆದಾರರಿಂದ ಸಂಗ್ರಹಿಸಿ ಅದನ್ನು ಸ್ವೀಕರಿಸುವ ಕೈಗಾರಿಕೆಗಳು ಮತ್ತು ವಾಣಿಜ್ಯೋದ್ಯಮ ಸಂಸ್ಥೆಗಳಿಗೆ ತಲುಪಿಸುವ ವ್ಯವಸ್ಥೆಯಾಗಿದೆ. ಸಂಕ್ಷಿಪ್ತವಾಗಿ, ಈ ಮಾರುಕಟ್ಟೆಯು ಕಂಪನಿಗಳ ಸಾಮಾನ್ಯ ಷೇರು ಮತ್ತು ಸಾಲಪತ್ರಗಳು ಮತ್ತು ಸರ್ಕಾರದ ಸಾಲಪತ್ರ ಮತ್ತು ಭದ್ರತೆಗಳನ್ನು ವ್ಯವಹರಿಸುವ ಮಾರುಕಟ್ಟೆಯಾಗಿದೆ.

ಸಂಪನ್ಮೂಲವು ವ್ಯಕ್ತಿಗಳು, ವರ್ತಕ ಬ್ಯಾಂಕುಗಳು, ವಾಣಿಜ್ಯ ಬ್ಯಾಂಕು, ಬ್ಯಾಂಕೇತರ ಹಣಕಾಸಿನ ಸಂಸ್ಥೆಗಳು ಇತ್ಯಾದಿಗಳಿಂದ ಬಂಡವಾಳ ಮಾರುಕಟ್ಟೆಗೆ ಹರಿದು ಬರುವುದು. ಸಂಪನ್ಮೂಲ ಅಥವಾ ನಿಧಿಗೆ ಬೇಡಿಕೆಯು ಕೂಡು ಬಂಡವಾಳ ಸಂಸ್ಥೆಗಳು, ರಾಜ್ಯ ಮತ್ತು

ಕೇಂದ್ರ ಸರ್ಕಾರ ಇತ್ಯಾಧಿಗಳಿಂದ ಬರುವುದು. ಬಂಡವಾಳ ಮಾರುಕಟ್ಟೆಯು ಒಳಗೊಂಡಿರುವ ಹಣಕಾಸಿನ ಪರಿಕರಗಳ ಪರಿಪಕ್ವತೆಯ ಅವಧಿಯು ಒಂದು ವರ್ಷಕ್ಕಿಂತ ಹೆಚ್ಚಾಗಿರುತ್ತದೆ. ಬಂಡವಾಳ ಮಾರುಕಟ್ಟೆಯು ಉಳಿತಾಯದಾರರಿಗೆ ಬಡ್ಡಿ ಅಥವಾ ಲಾಭಾಂಶ ಮತ್ತು ಹೂಡಿಕೆದಾರರ ನಡುವೆ ನಿಧಿಯ ವರ್ಗಾವಣೆಯಂತಹ ಸೌಲಭ್ಯಗಳನ್ನು ನೀಡುತ್ತದೆ. ಇದು ಸಂಪನ್ಮೂಲವನ್ನು ಅನುತ್ಪಾದಕ ಉದ್ದೇಶಗಳಿಂದ ಉತ್ಪಾದಕ ಉದ್ದೇಶಕ್ಕೆ ವರ್ಗಾಯಿಸುವುದು. ಇದು ಖಾಸಗಿ ಮತ್ತು ಸಾರ್ವಜನಿಕ ವಲಯದಲ್ಲಿನ ವಾಣಿಜ್ಯ ಮತ್ತು ಕೈಗಾರಿಕೆಯ ಅಭಿವೃದ್ಧಿಗೆ ನೆರವಾಗುವ ಮೂಲಕ ಆರ್ಥಿಕ ಬೆಳವಣಿಗೆಗೆ ನೆರವಾಗುವುದು.

ಹಾಗಾಗಿ, ಬಂಡವಾಳ ಮಾರುಕಟ್ಟೆಯೆಂದರೆ ಕೈಗಾರಿಕೆ ಮತ್ತು ಸರ್ಕಾರಗಳಿಗೆ ಅಗತ್ಯವಾದ ಮಧ್ಯಮಾವಧಿ ಮತ್ತು ದೀರ್ಘಾವಧಿ ಸಾಲವನ್ನು ವ್ಯವಹರಿಸುವ ಮಾರುಕಟ್ಟೆಯಾಗಿದೆ. ಬಂಡವಾಳ ಮಾರುಕಟ್ಟೆಯಲ್ಲಿ ಹಲವು ವಿಧದ ಹಣಕಾಸಿನ ಪರಿಕರಗಳಲ್ಲಿ ವ್ಯವಹರಿಸುವರು, ಅವುಗಳೆಂದರೆ

1. ಇಕ್ವಿಟಿ ಪರಿಕರಗಳು
2. ಸಾಲದ ಮಾರುಕಟ್ಟೆ ಪರಿಕರಗಳು
3. ವಿಮಾ ಪರಿಕರಗಳು
4. ವಿದೇಶಿ ವಿನಿಮಯ ಪರಿಕರಗಳು
5. ಹೈಬ್ರಿಡ್ ಪರಿಕರಗಳು
6. ಉತ್ಪನ್ನಗಳು

### *ಬಂಡವಾಳ ಮಾರುಕಟ್ಟೆಯ ಲಕ್ಷಣಗಳು:*

ಬಂಡವಾಳ ಮಾರುಕಟ್ಟೆಯ ಪ್ರಮುಖ ಲಕ್ಷಣಗಳೆಂದರೆ:

1. ಬಂಡವಾಳ ಮಾರುಕಟ್ಟೆಯು ದೀರ್ಘಾವಧಿ ಮತ್ತು ಮಧ್ಯಮಾವಧಿ ಸಂಪನ್ಮೂಲಗಳ ಮೂಲಕ ವ್ಯವಹರಿಸುತ್ತದೆ.
2. ಬಂಡವಾಳ ಮಾರುಕಟ್ಟೆಯು ಹೊಸ ಭದ್ರತಾ ಮಾರುಕಟ್ಟೆ, ಷೇರು ಮಾರುಕಟ್ಟೆ ಮತ್ತು ವಿಶೇಷ ಹಣಕಾಸಿನ ಸಂಸ್ಥೆಗಳನ್ನು ಒಳಗೊಂಡಿದೆ.
3. ದೀರ್ಘಾವಧಿ ಹಣಕಾಸಿನ ಪರಿಕರಗಳಲ್ಲಿನ ಹೂಡಿಕೆಯು ಅಧಿಕ ಬಂಡವಾಳ ಮಾರುಕಟ್ಟೆಯ ಗಂಡಾಂತರವನ್ನು ಒಳಗೊಂಡಿರುತ್ತದೆ.
4. ಇದು ಉಳಿತಾಯದಾರರು ಮತ್ತು ಹೂಡಿಕೆದಾರರ ನಡುವಿನ ಸೇತುವೆಯಾಗಿದೆ.
5. ಬಂಡವಾಳ ಮಾರುಕಟ್ಟೆಯ ವ್ಯವಹಾರವು ಕೈಗಾರಿಕೋದ್ಯಮಗಳು ಮತ್ತು ವಾಣಿಜ್ಯೋದ್ಯಮಗಳು, ವೈಯಕ್ತಿಕ ಹೂಡಿಕೆದಾರರು ಮತ್ತು ಸಾಂಸ್ಥಿಕ

ಹೂಡಿಕೆದಾರರನ್ನು ಒಳಗೊಂಡಿದೆ.

6. ಇದು ಹೂಡಿಕೆಯ ಉದ್ದೇಶಗಳಿಗೆ ಬಂಡವಾಳ ಸಂಗ್ರಹಿಸಲು ನೆರವಾಗುತ್ತದೆ.
7. ಬಂಡವಾಳ ಮಾರುಕಟ್ಟೆಯ ಪ್ರಮುಖ ಪರಿಕರಗಳೆಂದರೆ ಕೈಗಾರಿಕೆಗಳ ಪೇರುಗಳು ಮತ್ತು ಸಾಲಪತ್ರಗಳು ಇತ್ಯಾಧಿಗಳಾಗಿವೆ.

## *ಬಂಡವಾಳ ಮಾರುಕಟ್ಟೆಯ ಅಂಗಗಳು:*

ಬಂಡವಾಳ ಮಾರುಕಟ್ಟೆಯ ಪ್ರಮುಖ ಅಂಗಗಳೆಂದರೆ 1) ಅಸಂಘಟಿತ ಮತ್ತು 2) ಸಂಘಟಿತ ಬಂಡವಾಳ ಮಾರುಕಟ್ಟೆ

1. **ಅಸಂಘಟಿತ ಬಂಡವಾಳ ಮಾರುಕಟ್ಟೆ:** ಅಸಂಘಟಿತ ಬಂಡವಾಳ ಮಾರುಕಟ್ಟೆಯು ಹೆಚ್ಚಾಗಿ ದೇಶೀಯ ಅಥವಾ ಸ್ಥಳೀಯ ಲೇವಾದೇವಿಗಾರರು ಮತ್ತು ಬ್ಯಾಂಕರುಗಳನ್ನು ಒಳಗೊಂಡಿದೆ. ಇದು ಅಸಂಘಟಿತವಾಗಿರುವುದರಿಂದ ಕೇಂದ್ರ ಬ್ಯಾಂಕಿನ ನೇರ ನಿಯಂತ್ರಣ ಸಾಧ್ಯವಾಗುವುದಿಲ್ಲ. ಕಾನೂನುಗಳು ಬಡ್ಡಿದರಗಳನ್ನು ನಿಯಂತ್ರಿಸುತ್ತಿರುವುದರ ಹೊರತಾಗಿಯೂ ಇವರು ಅಧಿಕ ಬಡ್ಡಿದರವನ್ನು ವಿಧಿಸುವರು.
2. **ಸಂಘಟಿತ ಬಂಡವಾಳ ಮಾರುಕಟ್ಟೆ:** ಸಂಘಟಿತ ಬಂಡವಾಳ ಮಾರುಕಟ್ಟೆಯು ಕಾನೂನಿನ ಚೌಕಟ್ಟಿನ ಮೂಲಕ ನಿಯಂತ್ರಿಸಲ್ಪಡುವುದು. ಭಾರತದಲ್ಲಿ ಭಾರತೀಯ ಪೇರು ವಿನಿಮಯ ಮಂಡಳಿಯು (SEBI) ಬಂಡವಾಳ ಮಾರುಕಟ್ಟೆಯನ್ನು ನಿಯಂತ್ರಿಸುತ್ತದೆ. ಸಂಘಟಿತ ಬಂಡವಾಳ ಮಾರುಕಟ್ಟೆಯನ್ನು ಪ್ರಾಥಮಿಕ ಮತ್ತು ಮಾಧ್ಯಮಿಕ ಬಂಡವಾಳ ಮಾರುಕಟ್ಟೆಗಳಾಗಿ ವಿಂಗಡಿಸಲಾಗಿದೆ.

## ಪ್ರಾಥಮಿಕ ಬಂಡವಾಳ ಮಾರುಕಟ್ಟೆ ಮತ್ತು ಮಾಧ್ಯಮಿಕ ಬಂಡವಾಳ ಮಾರುಕಟ್ಟೆ

**1. ಪ್ರಾಥಮಿಕ ಬಂಡವಾಳ ಮಾರುಕಟ್ಟೆ:** ಈ ಮಾರುಕಟ್ಟೆಯಲ್ಲಿ ಸಂಪನ್ಮೂಲವನ್ನು ಪೇರುಗಳು, ಸಾಲಪತ್ರಗಳು ಮತ್ತು ಬಾಂಡುಗಳನ್ನು ಹೂಡಿಕೆದಾರರು ವಿತರಿಸುವ ಮೂಲಕ ಸಂಗ್ರಹಿಸಲಾಗುತ್ತದೆ. ಈ ಮಾರುಕಟ್ಟೆಯು ಹೊಸ ಪೇರುಗಳನ್ನು ಮಾತ್ರ ನೀಡುತ್ತದೆ. ಅಂದರೆ ಪೇರುಗಳು ಮತ್ತು ಭದ್ರತಾ ಪತ್ರಗಳನ್ನು ಮೊದಲ ಬಾರಿಗೆ ಮಾರಾಟ ಮಾಡಲಾಗುತ್ತದೆ. ಆದ್ದರಿಂದ ಈ ಮಾರುಕಟ್ಟೆಯನ್ನು ಹೊಸ ಪೇರು ಮಾರುಕಟ್ಟೆ ಎಂತಲೂ ಕರೆಯಲಾಗುತ್ತದೆ. ಈ ಮಾರುಕಟ್ಟೆಯಲ್ಲಿ ಭದ್ರತಾ ಪತ್ರಗಳನ್ನು ಕೈಗಾರಿಕೆಗಳು ಮತ್ತು ವಾಣಿಜ್ಯೋದ್ಯಮಗಳು ಹೂಡಿಕೆದಾರರಿಗೆ ವಿತರಿಸುವುದು.

**2. ಮಾಧ್ಯಮಿಕ ಬಂಡವಾಳ ಮಾರುಕಟ್ಟೆ:** ಈ ಮಾರುಕಟ್ಟೆಯಲ್ಲಿ ಈಗಾಗಲೇ ಮಾರಾಟ ಮಾಡಲಾಗಿರುವ ಭದ್ರತಾ ಪತ್ರಗಳ ಒಡೆತನವು ಹೂಡಿಕೆದಾರರ ನಡುವೆ

ವರ್ಗಾವಣೆಯಾಗುತ್ತದೆ. ಈ ಮಾರುಕಟ್ಟೆಯನ್ನು ಷೇರು ವಿನಿಮಯ ಮಾರುಕಟ್ಟೆ ಎಂದು ಕರೆಯುವರು. ಏಕೆಂದರೆ ಇದು ಷೇರುಗಳ ವಿನಿಮಯದ ವ್ಯವಹಾರವನ್ನು ಮಾಡುತ್ತದೆ. ಇದು ಅಸ್ತಿತ್ವದಲ್ಲಿರುವ ಭದ್ರತೆಗಳಿಗೆ ದ್ರವ್ಯತೆಯನ್ನು ಒದಗಿಸುವುದು.

| **ಆಧಾರ** | **ಹಣದ ಮಾರುಕಟ್ಟೆ** | **ಬಂಡವಾಳ ಮಾರುಕಟ್ಟೆ** |
|---|---|---|
| ಪರಿಕರಗಳ ಪರಿಪಕ್ವತೆ | ಒಂದು ವರ್ಷಕ್ಕಿಂತ ಕಡಿಮೆ | ಒಂದು ವರ್ಷಕ್ಕಿಂತ ಅಧಿಕ |
| ಗಂಡಾಂತರ | ಕಡಿಮೆ | ಅಧಿಕ ಮತ್ತು ಬದಲಾಗುತ್ತಿರುತ್ತದೆ |
| ಪರಿಕರಗಳು | ಖಜಾನೆ ಬಿಲ್ಲು, ವಾಣಿಜ್ಯ ಪತ್ರ ಇತ್ಯಾದಿ | ಷೇರುಗಳು, ಬಾಂಡುಗಳು ಇತ್ಯಾದಿ |
| ಹಣಕಾಸಿನ ಅವಧಿ | ಅಲ್ಪಾವಧಿ | ದೀರ್ಘಾವಧಿ |
| ಕೇಂದ್ರ ಬ್ಯಾಂಕಿನೊಂದಿಗಿನ ಸಂಬಂಧ | ನೇರ | ಪರೋಕ್ಷ |

ಒಟ್ಟಾರೆಯಾಗಿ ಹೇಳುವುದಾದರೆ, ಹಣದ ಮತ್ತು ಬಂಡವಾಳದ ಮಾರುಕಟ್ಟೆ ಎರಡೂ ಪರಸ್ಪರ ನಿಕಟ ಸಂಬಂಧವನ್ನು ಹೊಂದಿವೆ. ಇವುಗಳು ಉಳಿತಾಯ ಮತ್ತು ಹೂಡಿಕೆಯ ಮೂಲಕ ಆರ್ಥಿಕ ಅಭಿವೃದ್ಧಿಯಲ್ಲಿ ನಿರ್ಣಾಯಕ ಪಾತ್ರವನ್ನು ನಿರ್ವಹಿಸುತ್ತದೆ. ಇವುಗಳು ಪರೋಕ್ಷವಾಗಿ ದೇಶದ ಜನರಿಗೆ ಇತ್ತೀಚಿನ ದಿನಗಳಲ್ಲಿ ನಿರ್ಣಾಯಕವಾಗಿರುವ ಹಣಕಾಸಿನ ಶಿಕ್ಷಣವನ್ನು ಪರೋಕ್ಷವಾಗಿ ಹರಡುತ್ತಿವೆ.

## ಅಭ್ಯಾಸ

**I. ಈ ಕೆಳಗಿನ ಪ್ರಶ್ನೆಗಳಿಗೆ ನಾಲ್ಕು ಪರ್ಯಾಯ ಉತ್ತರಗಳನ್ನು ಕೊಡಲಾಗಿದೆ ಅವುಗಳಲ್ಲಿ ಸೂಕ್ತವಾದ ಉತ್ತರವನ್ನು ಆರಿಸಿ ಬರೆಯಿರಿ.**

1) ಹಣದ ಮಾರುಕಟ್ಟೆಯು ವ್ಯವಹರಿಸುವುದು ________

ಅ) ಸರ್ಕಾರಿ ಬಾಂಡು
ಆ) ಖಜಾನೆ ಬಿಲ್ಲು
ಇ) ವ್ಯಾಪಾರ ಬಿಲ್ಲು

ಈ) ಮೇಲಿನ ಎಲ್ಲವೂ

2) ಖಜಾನೆ ಬಿಲ್ಲುಗಳು _______ ದ ಪರಿಕರವಾಗಿವೆ

ಅ) ಶೂನ್ಯ ಗಂಡಾಂತರ
ಆ) ಕಡಿಮೆ ಗಂಡಾಂತರ
ಇ) ಅಧಿಕ ಗಂಡಾಂತರ
ಈ)ಮೇಲಿನ ಯಾವುದೂ ಅಲ್ಲ

3) ವಾಣಿಜ್ಯ ಪತ್ರಗಳನ್ನು ವಿತರಿಸುವವರು _______

ಅ) ಸರ್ಕಾರ
ಆ) ಬ್ಯಾಂಕುಗಳು
ಇ) ಹಣಕಾಸಿನ ಸಂಸ್ಥೆಗಳು
ಈ) ಮೇಲಿನ ಯಾವುದೂ ಅಲ್ಲ

4) ಬಂಡವಾಳ ಮಾರುಕಟ್ಟೆಗೆ ಸಂಪನ್ಮೂಲಗಳು _______ ಮೂಲದಿಂದ ಹರಿದು ಬರುತ್ತವೆ.

ಅ) ವ್ಯಕ್ತಿಗಳು

ಆ) ವ್ಯಾಪಾರಿ ಬ್ಯಾಂಕುಗಳು

ಇ) ವಾಣಿಜ್ಯ ಬ್ಯಾಂಕುಗಳು

ಈ) ಮೇಲಿನ ಎಲ್ಲವೂ

5) ಪ್ರಾಥಮಿಕ ಬಂಡವಾಳ ಮಾರುಕಟ್ಟೆಯನ್ನು _______ ಮಾರುಕಟ್ಟೆಯೆಂದು ಕರೆಯಲಾಗುತ್ತದೆ.

ಅ) ಹೊಸ ನೀಡಿಕೆ
ಆ) ಬೆಳೆಯುತ್ತಿರುವುದರ ನೀಡಿಕೆ (ಅಂಕುರಿಸುತ್ತಿರುವುದರ ನೀಡಿಕೆ)
ಇ) ಮೂಲ ನೀಡಿಕೆ
ಈ) ಮೇಲಿನ ಯಾವುದೂ ಅಲ್ಲ

**II. ಈ ಕೆಳಗಿನ ವಾಕ್ಯಗಳಲ್ಲಿ ಖಾಲಿ ಬಿಟ್ಟ ಸ್ಥಳಗಳನ್ನು ತುಂಬಿರಿ.**

1. ಠೇವಣಿ ಪತ್ರಗಳನ್ನು ವಿತರಿಸುವರು ________
2. ಖಜಾನೆ ಬಿಲ್ಲುಗಳನ್ನು ವಿತರಿಸುವವರು _______

3. ಬ್ಯಾಂಕುಗಳು ಸಮ್ಮತಿಸುವ ಪತ್ರದ ಪರಿಪಕ್ವತೆಯ ಅವಧಿ ಸಾಮಾನ್ಯವಾಗಿ _______ ದಿನಗಳಾಗಿವೆ.
4. ಬಂಡವಾಳ ಮಾರುಕಟ್ಟೆಯು _______ ಅವಧಿ ಮತ್ತು _______ ಅವದಿಯ ನಿಧಿಗಳಲ್ಲಿ ಮಾತ್ರ ವ್ಯವಹರಿಸುವುದು.
5. ಭಾರತದಲ್ಲಿ ಎಸ್. ಇ. ಬಿ. ಐ. ಯು _______ ಮಾರುಕಟ್ಟೆಯನ್ನು

ನಿಯಂತ್ರಿಸುವುದು.

**III. ಈ ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

1. ಹಣದ ಮಾರುಕಟ್ಟೆ ಎಂದರೇನು?
2. ಹಣದ ಮಾರುಕಟ್ಟೆಯ ಪರಿಕರಗಳನ್ನು ಪಟ್ಟಿ ಮಾಡಿರಿ.
3. ಬಂಡವಾಳ ಮಾರುಕಟ್ಟೆಯು ಯಾವ ರೀತಿಯ ನಿಧಿಗಳಲ್ಲಿ ವ್ಯವಹರಿಸುವುದು?
4. ಬಂಡವಾಳ ಮಾರುಕಟ್ಟೆಯ ಪ್ರಮುಖ ಭಾಗಗಳನ್ನು ಹೆಸರಿಸಿ.
5. ಎಸ್. ಬಿ. ಐ. ಯನ್ನು ವಿಸ್ತರಿಸಿ.

**IV. ಈ ಕೆಳಗಿನ ಪ್ರಶ್ನೆಗಳಿಗೆ ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿ.**

1. ಹಣದ ಮಾರುಕಟ್ಟೆಯಲ್ಲಿನ ಸಾಲ ಪಡೆಯುವವರನ್ನು ಪಟ್ಟಿ ಮಾಡಿರಿ.
2. ಹಣದ ಮಾರುಕಟ್ಟೆಯಲ್ಲಿನ ಸಾಲ ನೀಡುವವರನ್ನು ಹೆಸರಿಸಿ.
3. ಠೇವಣಿ ಪತ್ರಗಳು ಒಳಗೊಂಡಿರುವ ವಿವರಗಳನ್ನು ತಿಳಿಸಿ.
4. ಬಂಡವಾಳ ಮಾರುಕಟ್ಟೆಯಲ್ಲಿ ವ್ಯವಹರಿಸುವ ವಿವಿಧ ಹಣಕಾಸಿನ ಪರಿಕರಗಳನ್ನು ಹೆಸರಿಸಿ.
5. ಮಾಧ್ಯಮಿಕ ಬಂಡವಾಳ ಮಾರುಕಟ್ಟೆಯ ಮತ್ತೊಂದು ಹೆಸರೇನು?

**V. ಈ ಕೆಳಗಿನ ಪ್ರಶ್ನೆಗಳಿಗೆ ಎಂಟು ವಾಕ್ಯಗಳಲ್ಲಿ ಉತ್ತರಿಸಿ.**

1. ಖಜಾನೆ ಪತ್ರಗಳು ಮತ್ತು ವಾಣಿಜ್ಯ ಪತ್ರಗಳ ಕುರಿತು ಟಿಪ್ಪಣಿ ಬರೆಯಿರಿ.
2. ಹಣದ ಮಾರುಕಟ್ಟೆಯ ಲಕ್ಷಣಗಳನ್ನು ಚರ್ಚಿಸಿ.
3. ಬಂಡವಾಳ ಮಾರುಕಟ್ಟೆಯ ವಿವಿಧ ಲಕ್ಷಣಗಳನ್ನು ಚರ್ಚಿಸಿ.

4. ಬಂಡವಾಳ ಮಾರುಕಟ್ಟೆಯ ಅಂಗಗಳ ಮೇಲೆ ಸಂಕ್ಷಿಪ್ತವಾಗಿ ಟಿಪ್ಪಣಿ ಬರೆಯಿರಿ.
5. ಹಣದ ಮಾರುಕಟ್ಟೆ ಮತ್ತು ಬಂಡವಾಳ ಮಾರುಕಟ್ಟೆ ನಡುವಿನ ವ್ಯತ್ಯಾಸವನ್ನು ಬರೆಯಿರಿ.

**ನಿಯೋಜಿತ ಕಾರ್ಯ:** ನಮ್ಮ ದೇಶದಲ್ಲಿನ ವಾಣಿಜ್ಯ ಬ್ಯಾಂಕುಗಳನ್ನು ಪಟ್ಟಿ ಮಾಡಿರಿ.

ನಮ್ಮ ದೇಶದಲ್ಲಿನ ಬ್ಯಾಂಕೇತರ ಹಣಕಾಸಿನ ಮಧ್ಯವರ್ತಿಗಳನ್ನು ಪಟ್ಟಿ ಮಾಡಿರಿ.

## ಅಧ್ಯಾಯ- 6: ರಾಷ್ಟ್ರೀಯ ಆದಾಯ

"ಒಂದು ದೇಶದ ರಾಷ್ಟ್ರೀಯ ಆದಾಯವನ್ನು ಎರಡು ವಿಧಾನಗಳಲ್ಲಿ ನೋಡಬಹುದಾಗಿದೆ. ಇದನ್ನು ಉತ್ಪಾದನೆಯಾದ ಎಲ್ಲ ಸರಕು ಮತ್ತು ಸೇವೆಗಳ ಒಟ್ಟು ಮೊತ್ತದ ಹಣದ ಮೌಲ್ಯವೆಂದು ಪರಿಗಣಿಸಬಹುದು, ಅಥವಾ ನಿರ್ದಿಷ್ಟ ಅವಧಿಯಲ್ಲಿ ಅಂದರೆ ಸಾಮಾನ್ಯವಾಗಿ ಒಂದು ವರ್ಷದ ಅವಧಿಯಲ್ಲಿ ಆರ್ಥಿಕ ಚಟುವಟಿಕೆಗಳಿಂದ ಪಡೆದ ಎಲ್ಲ ಆದಾಯಗಳ ಮೊತ್ತವಾಗಿದೆ. ಹೀಗಾಗಿ ರಾಷ್ಟ್ರೀಯ ಆದಾಯ ಹಾಗೂ ಉತ್ಪಾದನೆಯ ಮೊತ್ತಗಳು ಒಂದೇ ಅಂಶದ ಪರ್ಯಾಯ ಶಬ್ದಗಳಾಗಿವೆ" ಜೆ. ಎಲ್. ಹ್ಯಾನ್ಸೆನ್

### ಪೀಠಿಕೆ:

ಅರ್ಥವ್ಯವಸ್ಥೆಯ ಗಾತ್ರ ಮತ್ತು ಬೆಳವಣಿಗೆಯನ್ನು, ಒಂದು ನಿರ್ದಿಷ್ಟ ಅವಧಿಯಲ್ಲಿ ರಾಷ್ಟ್ರದಲ್ಲಿ ಉತ್ಪಾದನೆಯಾದ ಒಟ್ಟು ಆದಾಯದ ಆಧಾರದ ಮೇಲೆ ಮಾಪನ ಮಾಡಲಾಗುತ್ತದೆ. ಸಾಮಾನ್ಯವಾಗಿ ಜಿಡಿಪಿ ಅಥವಾ ಒಟ್ಟು ದೇಶೀಯ ಉತ್ಪನ್ನದ ಪರಿಭಾವನೆಯ ಮೂಲಕ ದೇಶದ ಅಭಿವೃದ್ಧಿ/ ಬೆಳವಣಿಗೆಯನು ಮಾಪನ ಮಾಡಲಾಗುತ್ತದೆ. ಹಾಗಾದರೆ, ರಾಷ್ಟ್ರೀಯ ಆದಾಯ ಎಂದರೇನು? ರಾಷ್ಟ್ರೀಯ ಆದಾಯದ ಲಕ್ಷಣಗಳಾವುವು? ರಾಷ್ಟ್ರೀಯ ಆದಾಯದ ಮಹತ್ವ ಮತ್ತು ಉಪಯೋಗವೇನು? ರಾಷ್ಟ್ರೀಯ ಆದಾಯದ ವಿವಿಧ ಪರಿಕಲ್ಪನೆಗಳಾವುವು? ಒಟ್ಟು ದೇಶೀಯ ಉತ್ಪನ್ನ (ಜಿಡಿಪಿ), ಒಟ್ಟು ರಾಷ್ಟ್ರೀಯ ಉತ್ಪನ್ನ (ಜಿಎನ್‌ಪಿ), ನಿವ್ವಳ ರಾಷ್ಟ್ರೀಯ ಉತ್ಪನ್ನ (ಎನ್‌ಎನ್‌ಪಿ), ತಲಾ ಆದಾಯ (ಪಿಸಿಐ), ವೈಯಕ್ತಿಕ ಆದಾಯ (ಪಿಐ) ಮತ್ತು ವೆಚ್ಚ ಮಾಡಬಹುದಾದ ವೈಯಕ್ತಿಕ ಆದಾಯ (ಡಿಪಿಐ)ಗಳ ಅರ್ಥವೇನು? ರಾಷ್ಟ್ರೀಯ ಆದಾಯ ಮಾಪನದ ವಿಧಾನಗಳಾವುವು? ರಾಷ್ಟ್ರೀಯ ಆದಾಯ ಮಾಪನದಲ್ಲಿನ ತೊಡಕುಗಳಾವುವು? ಈ ಅಧ್ಯಾಯದ ಅಧ್ಯಯನದ ನಂತರ ನೀವು ಈ ಮೇಲಿನ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳುವಿರಿ ಮತ್ತು ರಾಷ್ಟ್ರೀಯ ಆದಾಯದ ಇತರೆ ಪರಿಕಲ್ಪನೆಗಳನ್ನು ಅರ್ಥಮಾಡಿಕೊಳ್ಳುವಿರಿ.

### ರಾಷ್ಟ್ರೀಯ ಆದಾಯದ ಅರ್ಥ ಮತ್ತು ವ್ಯಾಖ್ಯೆ:

ರಾಷ್ಟ್ರೀಯ ಆದಾಯವು ಆರ್ಥಿಕ ಕಾರ್ಯನಿರ್ವಹಣೆಯ ಅತ್ಯಂತ ಪ್ರಮುಖ ಸೂಚಿಯಾಗಿದ್ದು, ಇದರ ಮೂಲಕ ಆರ್ಥಿಕ ಅಭಿವೃದ್ಧಿಯನ್ನು ಮಾಪನ ಮಾಡುತ್ತದೆ.

ಒಂದು ರಾಷ್ಟ್ರದಲ್ಲಿ ಒಂದು ನಿರ್ದಿಷ್ಟ ವರ್ಷದಲ್ಲಿ ಉತ್ಪಾದಿಸಲಾದ ಎಲ್ಲಾ ಸರಕು ಮತ್ತು ಸೇವೆಗಳ ಒಟ್ಟು ಹಣದ ಮೊತ್ತವೇ ರಾಷ್ಟ್ರೀಯ ಆದಾಯವಾಗಿದೆ.

ಆಲ್‌ಫ್ರೆಡ್ ಮಾರ್ಷಲ್‌ರವರು: "ಒಂದು ದೇಶದ ಶ್ರಮ ಮತ್ತು ಬಂಡವಾಳ, ಅಲ್ಲಿನ ನೈಸರ್ಗಿಕ ಸಂಪತ್ತಿನ ಮೇಲೆ ಸಕ್ರಿಯವಾಗಿ ವರ್ತಿಸಿ ಒಂದು ವರ್ಷದಲ್ಲಿ ಉತ್ಪಾದಿಸುವ ನಿರ್ದಿಷ್ಟ ಪ್ರಮಾಣದ ನಿವ್ವಳ ಭೌತಿಕ ಮತ್ತು ಭೌತಿಕವಲ್ಲದ ಸಮಗ್ರ ಸರಕುಗಳು ಮತ್ತು ಎಲ್ಲಾ ವಿಧದ ಸೇವೆಗಳನ್ನು ಒಳಗೊಂಡಿದೆ. ಇದು ನಿವ್ವಳ ವಾರ್ಷಿಕ ಆದಾಯ ಅಥವಾ ದೇಶದ ಆದಾಯ ಅಥವಾ ರಾಷ್ಟ್ರೀಯ ಆದಾಯವಾಗಿದೆ". ಎಂದು ವ್ಯಾಖ್ಯಾನಿಸಿದ್ದಾರೆ.

ಫಿಷರ್‌ರವರು: 'ನೈಜ ರಾಷ್ಟ್ರೀಯ ಆದಾಯವು ಅದೇ ವರ್ಷದಲ್ಲಿ ಜನರು ನೇರವಾಗಿ ಬಳಸಿದ ವಾರ್ಷಿಕ ನಿವ್ವಳ ಉತ್ಪನ್ನದ ಭಾಗವಾಗಿದೆ' ಎಂದು ರಾಷ್ಟ್ರೀಯ ವರಮಾನವನ್ನು ವ್ಯಾಖ್ಯಾನಿಸಿದ್ದಾರೆ.

ಈ ವ್ಯಾಖ್ಯೆಗಳಿಂದ ಸ್ಪಷ್ಟವಾಗುವ ಅಂಶವೆಂದರೆ, ರಾಷ್ಟ್ರೀಯ ಆದಾಯವೆಂಬುದು ಒಂದು ನಿರ್ದಿಷ್ಟ ವರ್ಷದಲ್ಲಿ ಒಂದು ರಾಷ್ಟ್ರದಲ್ಲಿ ಉತ್ಪಾದನೆಯಾದ ಎಲ್ಲಾ ಅಂತಿಮ ಸರಕು ಮತ್ತು ಸೇವೆಗಳ ಒಟ್ಟಾರೆ ಹಣದ ಮೌಲ್ಯವಾಗಿದೆ. ರಾಷ್ಟ್ರೀಯ ಆದಾಯವನ್ನು ಗೇಣಿ, ಕೂಲಿಗಳು, ಬಡ್ಡಿ ಮತ್ತು ಲಾಭಗಳ ರೂಪದಲ್ಲಿ ವಿವಿಧ ಉತ್ಪಾದನಾಂಗಗಳ ನಡುವೆ ವಿತರಣೆ ಮಾಡಲಾಗುತ್ತದೆ. ರಾಷ್ಟ್ರೀಯ ಆದಾಯವು ಅಧಿಕವಾಗಿದ್ದರೆ, ಪ್ರತಿ ಉತ್ಪಾದನಾಂಗಗಳ ಪಾಲು ಅಧಿಕವಾಗಿರುತ್ತದೆ.

## ರಾಷ್ಟ್ರೀಯ ಆದಾಯದ ಲಕ್ಷಣಗಳು:

ರಾಷ್ಟ್ರೀಯ ಆದಾಯದ ಪ್ರಮುಖ ಲಕ್ಷಣಗಳು ಈ ಕೆಳಗಿನಂತಿವೆ:

1. ಹಣಕಾಸಿನ ವರ್ಷ: ರಾಷ್ಟ್ರೀಯ ಆದಾಯವನ್ನು ಒಂದು ಹಣಕಾಸಿನ ವರ್ಷದ ಅವಧಿಗೆ ಲೆಕ್ಕ ಹಾಕಲಾಗುತ್ತದೆ. ಭಾರತದಲ್ಲಿ ಹಣಕಾಸಿನ ವರ್ಷವು ಏಪ್ರಿಲ್ 1 ರಂದು ಪ್ರಾರಂಭವಾಗಿ ಮುಂದಿನ ವರ್ಷದ ಮಾರ್ಚ್ 31 ರಂದು ಕೊನೆಗೊಳ್ಳುತ್ತದೆ.
2. ಹರಿವಿನ ಪರಿಕಲ್ಪನೆ: ರಾಷ್ಟ್ರೀಯ ಆದಾಯವು ಹರಿವಿನ ಪರಿಕಲ್ಪನೆಯಾಗಿದೆ. ರಾಷ್ಟ್ರೀಯ ಆದಾಯವು ಒಂದು ವರ್ಷದ ಅವಧಿಯಲ್ಲಿನ ಸರಕು ಮತ್ತು ಸೇವೆಗಳ ಚಲನೆ ಅಥವಾ ಹರಿವನ್ನು ಮಾಪನ ಮಾಡುತ್ತದೆ.
3. ಅಂತಿಮ ಸರಕು ಮತ್ತು ಸೇವೆಗಳ ಮೌಲ್ಯ: ರಾಷ್ಟ್ರೀಯ ಆದಾಯವು ಒಂದು ನಿರ್ದಿಷ್ಟ ವರ್ಷದಲ್ಲಿ ಉತ್ಪಾದಿಸಲಾದ ಸರಕು ಮತ್ತು ಸೇವೆಗಳ ಅಂತಿಮ ಮೌಲ್ಯವನ್ನು ಮಾತ್ರ ಒಳಗೊಳ್ಳುತ್ತದೆ. ಇದು ದ್ವಿಗಣನೆಯನ್ನು ತಪ್ಪಿಸುವ ಉದ್ದೇಶದಿಂದ ಮಧ್ಯವರ್ತಿ ಸರಕುಗಳನ್ನು ರಾಷ್ಟ್ರೀಯ ಆದಾಯದ ಲೆಕ್ಕಾಚಾರದಲ್ಲಿ ಸೇರಿಕೊಳ್ಳುವುದಿಲ್ಲ.

4. ಅಂತಿಮ ಸರಕು ಮತ್ತು ಸೇವೆಗಳ ಹಣದ ಮೌಲ್ಯ: ರಾಷ್ಟ್ರೀಯ ಆದಾಯವನ್ನು ಸದಾ ಅಂತಿಮ ಸರಕು ಮತ್ತು ಸೇವೆಗಳ ಹಣರೂಪಿ ಮೌಲ್ಯದಲ್ಲಿ ವ್ಯಕ್ತಪಡಿಸಲಾಗುತ್ತದೆ.

## ರಾಷ್ಟ್ರೀಯ ಆದಾಯದ ಮಹತ್ವ ಮತ್ತು ಉಪಯೋಗಗಳು

ರಾಷ್ಟ್ರೀಯ ಆದಾಯದ ಅಂಕಿಅಂಶಗಳು ಸರ್ಕಾರದ ಯೋಜನೆ, ನೀತಿ ನಿರೂಪಣೆ, ಆಯವ್ಯಯ ತಯಾರಿ ಮತ್ತು ಆರ್ಥಿಕ ಚಟುವಟಿಕೆಗಳ ಮಟ್ಟವನ್ನು ಅಂದಾಜಿಸಲು ನೆರವಾಗುತ್ತದೆ. ರಾಷ್ಟ್ರೀಯ ಆದಾಯದ ಪ್ರಮುಖ ಮಹತ್ವ ಮತ್ತು ಉಪಯೋಗಗಳೆಂದರೆ

1. ಆರ್ಥಿಕ ಆರೋಗ್ಯದ ಸೂಚಕ: ರಾಷ್ಟ್ರೀಯ ಆದಾಯವು ದೇಶದ ಆರ್ಥಿಕ ಆರೋಗ್ಯದ ಚಿತ್ರಣವನ್ನು ನೀಡುವುದು. ಇದು ಆರ್ಥಿಕತೆಯ ಬೆಳವಣಿಗೆಯ ಸ್ವರೂಪವನ್ನು ಮತ್ತು ನೈಸರ್ಗಿಕ, ಭೌತಿಕ ಮತ್ತು ಹಣಕಾಸಿನ ಸಂಪನ್ಮೂಲಗಳನ್ನು ಇದು ಹೇಗೆ ಬಳಸಿಕೊಳ್ಳುತ್ತದೆ ಎಂಬುದನ್ನು ತಿಳಿಸುತ್ತದೆ.
2. ಆರ್ಥಿಕ ಅಭಿವೃದ್ಧಿಯ ಸೂಚಕ: ರಾಷ್ಟ್ರೀಯ ಆದಾಯವನ್ನು ಆರ್ಥಿಕ ಬೆಳವಣಿಗೆಯ ಸೂಚಕವಾಗಿ ಸಾರ್ವತ್ರಿಕವಾಗಿ ಒಪ್ಪಿಕೊಳ್ಳಲಾಗಿದೆ. ಇದನ್ನು ದೇಶದ ಆರ್ಥಿಕ ಅಭಿವೃದ್ಧಿಯನ್ನು ಮಾಪನ ಮಾಡುವ ವಿಸ್ತೃತವಾದ ಸಮಗ್ರ ಆರ್ಥಿಕತೆಯ ಸೂಚಕ ಎಂದು ಪರಿಗಣಿಸಲಾಗಿದೆ.

3. ಆದಾಯದ ಹಂಚಿಕೆ: ರಾಷ್ಟ್ರೀಯ ಆದಾಯವು ವಿವಿಧ ಉತ್ಪಾದನಾಂಗಗಳಾದ ಭೂಮಿ, ಶ್ರಮ, ಬಂಡವಾಳ ಮತ್ತು ಉದ್ಯಮ ಸಾಹಸಿಗಳಿಗೆ ಪ್ರತಿಫಲವಾದ ಗೇಣಿ, ಕೂಲಿ, ಬಡ್ಡಿ ಮತ್ತು ಲಾಭವು ಹಂಚಿಕೆಯಾಗಿರುವ ಬಗ್ಗೆ ಮಾಹಿತಿಯನ್ನು ನೀಡುತ್ತದೆ.
4. ರಚನಾತ್ಮಕ ಬದಲಾವಣೆಯ ಜ್ಞಾನ: ರಾಷ್ಟ್ರೀಯ ಆದಾಯಕ್ಕೆ ಅರ್ಥವ್ಯವಸ್ಥೆಯ ವಿವಿಧ ವಲಯಗಳಾದ ಕೃಷಿ, ಕೈಗಾರಿಕೆ ಮತ್ತು ಸೇವಾವಲಯದ ಕೊಡುಗೆಯ ಕುರಿತು ಮಾಹಿತಿ ನೀಡುತ್ತದೆ. ಇದು ಆರ್ಥಿಕತೆಯ ರಚನಾತ್ಮಕ ನ್ಯೂನತೆಗಳನ್ನು ಕಂಡುಹಿಡಿಯಲು ನೆರವಾಗುವುದು.

5. ಅಂತರ ವಲಯಗಳ ಹೋಲಿಕೆ: ರಾಷ್ಟ್ರೀಯ ಆದಾಯವು ಕೃಷಿ, ಕೈಗಾರಿಕೆ ಮತ್ತು ಸೇವಾ ವಲಯಗಳ ನಡುವಿನ ಅಂತರ ವಲಯಗಳ ಬೆಳವಣಿಗೆಯ ಅಧ್ಯಯನಕ್ಕೆ ನೆರವಾಗುವುದು. ಈ ರೀತಿಯ ಹೋಲಿಕೆಗಳು ಪ್ರತಿ ವಲಯಗಳು ಇತರೆ ವಲಯಗಳಿಗೆ ಸಂಬಂಧಿಸಿದಂತೆ ಯಾವ ದಿಕ್ಕಿನಲ್ಲಿ ಬದಲಾಗುತ್ತದೆ ಎಂಬ ಮಾಹಿತಿ ನೀಡುವ ಮೂಲಕ ಉಪಯುಕ್ತವಾಗಿದೆ. ಒಂದು ವೇಳೆ ರಾಷ್ಟ್ರೀಯ ಆದಾಯಕ್ಕೆ ಕೃಷಿಯ ಕೊಡುಗೆ ಕ್ಷೀಣಿಸಿದರೆ ಮತ್ತು ಕೈಗಾರಿಕೆ ಮತ್ತು ಸೇವಾ ವಲಯದ ಕೊಡುಗೆ ಹೆಚ್ಚಾದರೆ ಇದು ಈ ಎರಡು ವಲಯಗಳಲ್ಲಿನ ಪ್ರಗತಿಯನ್ನು ಸೂಚಿಸುತ್ತದೆ.

6. ನೀತಿ ನಿರೂಪಣೆಗೆ ನೆರವು: ರಾಷ್ಟ್ರೀಯ ಆದಾಯವು ಆರ್ಥಿಕತೆಯ ಸ್ಥಗಿತತೆಯಿಂದ ಬಳಲುವ ವಲಯಗಳ ಮಾಹಿತಿಯನ್ನು ನೀಡುವುದು. ಇದರ ಆಧಾರದ ಮೇಲೆ ನೀತಿ ನಿರೂಪಕರು ಅವುಗಳ ಅಭಿವೃದ್ಧಿಗೆ ಸೂಕ್ತ ನೀತಿಗಳನ್ನು ರೂಪಿಸಲು ನೆರವಾಗುತ್ತದೆ. ಉದಾಹರಣೆಗೆ ಕೃಷಿಯು ಸ್ಥಗಿತತೆಯಿಂದ ಬಳಲುತ್ತಿದ್ದರೆ, ಅದನ್ನು ಚಲನಾತ್ಮಕಗೊಳಿಸಲು ಸೂಕ್ತವಾದ ನೀತಿಯನ್ನು ರೂಪಿಸಲು ಸಹಾಯಕವಾಗುತ್ತದೆ.

7. ಅಂತರಾಷ್ಟ್ರೀಯ ಹೋಲಿಕೆಗೆ ನೆರವು: ವಿಶ್ವದ ಎಲ್ಲಾ ರಾಷ್ಟ್ರಗಳು ಅವರ ರಾಷ್ಟ್ರೀಯ ಆದಾಯವನ್ನು ಮಾಪನ ಮಾಡುವುದರಿಂದಾಗಿ ವಿವಿಧ ರಾಷ್ಟ್ರಗಳ ಅರ್ಥವ್ಯವಸ್ಥೆಯ ಸ್ಥಾನ ಮತ್ತು ಕಾರ್ಯನಿರ್ವಹಣೆಯನ್ನು ಹೋಲಿಕೆ ಮಾಡುವುದು ಸುಲಭವಾಗಿದೆ. ಹಾಗಾಗಿ ರಾಷ್ಟ್ರೀಯ ಆದಾಯದ ಅಂದಾಜಿನ ಮೂಲಕ ನಾವು ದೇಶದ ಜನರ ಜೀವನಮಟ್ಟವನ್ನು ಅಂತರಾಷ್ಟ್ರೀಯ ಮಟ್ಟದಲ್ಲಿ ಹೋಲಿಕೆಯನು ಮಾಡಬಹುದು.

8. ಅಂತರಾಷ್ಟ್ರೀಯ ಸಂಸ್ಥೆಗಳಿಗೆ ನೀಡುವ ಕೊಡುಗೆಯ ಸಾಮರ್ಥ: ಅಂತರಾಷ್ಟ್ರೀಯ ಸಂಸ್ಥೆಗಳಾದ ವಿಶ್ವಸಂಸ್ಥೆ, ಅಂತರಾಷ್ಟ್ರೀಯ ಹಣಕಾಸು ನಿಧಿ, ಇತ್ಯಾದಿಗಳಿಗೆ ಒಂದು ರಾಷ್ಟ್ರದ ದೇಣಿಗೆಯ ಮೊತ್ತವನ್ನು ರಾಷ್ಟ್ರೀಯ ಆದಾಯದ ಗಾತ್ರ ಮತ್ತು ಬೆಳವಣಿಗೆಯ ಆಧಾರದ ಮೇಲೆ ನಿರ್ಧರಿಸಲಾಗುತ್ತದೆ.

## ರಾಷ್ಟ್ರೀಯ ಆದಾಯದ ಪ್ರಮುಖ ಪರಿಭಾವನೆಗಳು:

ರಾಷ್ಟ್ರೀಯ ಆದಾಯಕ್ಕೆ ಸಂಬಂಧಿಸಿದಂತೆ ಹಲವು ಪರಿಕಲ್ಪನೆಗಳು ಮತ್ತು ಮಾಪನದ ವಿಧಾನಗಳಿವೆ. ಅವುಗಳಲ್ಲಿ ಪ್ರಮುಖವಾದವುಗಳನ್ನು ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ.

1. ಒಟ್ಟು ರಾಷ್ಟ್ರೀಯ ಉತ್ಪನ್ನ (ಜಿ. ಎನ್. ಪಿ)
2. ನಿವ್ವಳ ರಾಷ್ಟ್ರೀಯ ಉತ್ಪನ್ನ (ಎನ್. ಎನ್. ಪಿ)
3. ಒಟ್ಟು ದೇಶೀಯ ಉತ್ಪನ್ನ (ಜಿ. ಡಿ. ಪಿ)
4. ವೈಯಕ್ತಿಕ ಆದಾಯ (ಪಿ. ಐ)
5. ವಿನಿಯೋಗಿಸಬಹುದಾದ ವೈಯಕ್ತಿಕ ಆದಾಯ (ಡಿ. ಪಿ. ಐ)
6. ತಲಾದಾಯ (ಪಿ. ಸಿ. ಐ)

1. **ಒಟ್ಟು ರಾಷ್ಟ್ರೀಯ ಉತ್ಪನ್ನ (ಜಿ. ಎನ್. ಪಿ):**

ಜಿ. ಎನ್. ಪಿ. ಯು ಒಂದು ರಾಷ್ಟ್ರವು ಒಂದು ವರ್ಷದ ಅವಧಿಯಲ್ಲಿ ಉತ್ಪಾದಿಸಿದ ಎಲ್ಲಾ ಅಂತಿಮ ಬಳಕೆಯ ಸರಕು ಮತ್ತು ಸೇವೆಗಳ ಒಟ್ಟು ಮಾರುಕಟ್ಟೆ ಮೌಲ್ಯವಲ್ಲದೇ ವಿದೇಶದಿಂದ ದೊರಕುವ ನಿವ್ವಳ ಆದಾಯವನ್ನು ಒಳಗೊಂಡಿದೆ. ಇದು ಒಳಗೊಂಡಿರುವ ನಾಲ್ಕು ಅಂಶಗಳೆಂದರೆ 1) ಅಂತಿಮ ಅನುಭೋಗಿ ಸರಕು ಮತ್ತು ಸೇವೆಗಳ ಮೌಲ್ಯ 2) ಸ್ಥಿರ ಬಂಡವಾಳ ಸಂಚಯನ, ಗೃಹ ನಿರ್ಮಾಣ ಮತ್ತು ಸಿದ್ಧಪಡಿಸಿದ ಮತ್ತು ಅರೆಸಿದ್ಧಪಡಿಸಿದ ಸರಕುಗಳ ರೂಪದಲ್ಲಾಗುವ ಖಾಸಗಿ ದೇಶಿಯ ಹೂಡಿಕೆ 3) ಸರ್ಕಾರದಿಂದ ಉತ್ಪಾದಿಸಲ್ಪಟ್ಟ ಸರಕು ಮತ್ತು ಸೇವೆಗಳ ಮೊತ್ತ ಹಾಗೂ 4) ಸರಕು ಮತ್ತು ಸೇವೆಗಳ ನಿವ್ವಳ ರಫ್ತು ಅಂದರೆ, ರಫ್ತು ಮತ್ತು ಆಮದು ಸರಕು ಮತ್ತು ಸೇವೆಗಳ ನಡುವಿನ ವ್ಯತ್ಯಾಸವಾಗಿದ್ದು, ಇದನ್ನು ನಿವ್ವಳ ವಿದೇಶಿ ಆದಾಯ ಎಂದು ಕರೆಯಲಾಗುತ್ತದೆ.

ಜಿ. ಎನ್. ಪಿ ಪರಿಭಾವನೆಯು ರಾಷ್ಟ್ರೀಯ ಆದಾಯದಲ್ಲೇ ಅತಿ ಹೆಚ್ಚು ಬಳಸಲ್ಪಡುತ್ತಿರುವ ಪರಿಕಲ್ಪನೆಯಾಗಿದೆ. ಇದು ಇತರೆ ಸೂಚಿಗಳಿಗಿಂತ ಉತ್ತಮವಾದ ಪರಿಭಾವನೆಯಾಗಿದೆ. ಇದು ನಿರ್ದಿಷ್ಟ ಅವಧಿಯಲ್ಲಿ ಒಂದು ದೇಶದ ಉತ್ಪಾದನೆ ಮತ್ತು ಉದ್ಯೋಗದ ನೈಜ ಸ್ಥಿತಿಯನ್ನು ವ್ಯಕ್ತಪಡಿಸತ್ತದೆ. ಇದು ಆರ್ಥಿಕತೆಯ ಕಾರ್ಯನಿರ್ವಹಣೆಯ ಒಂದು ಸಾಮಾನ್ಯ ಚಿತ್ರಣವನ್ನು ಒದಗಿಸುತ್ತದೆ.

## 2) **ನಿವ್ವಳ ರಾಷ್ಟ್ರೀಯ ಉತ್ಪನ್ನ (ಎನ್. ಎನ್. ಪಿ):**

ಜಿ. ಎನ್. ಪಿ. ಯು ಅನುಭೋಗ ಮತ್ತು ಹೂಡಿಕೆಯ ಸರಕಿನ ಒಟ್ಟು ಉತ್ಪಾದನೆಯ ಮೌಲ್ಯವನ್ನು ಒಳಗೊಳ್ಳುವುದು. ಆದರೆ ಉತ್ಪಾದನಾ ಪ್ರಕ್ರಿಯೆಯಲ್ಲಿ ನಿರ್ದಿಷ್ಟ ಮೊತ್ತದ ಸ್ಥಿರ ಬಂಡವಾಳವನ್ನು ಬಳಸಲಾಗುತ್ತದೆ. ಇದರ ಕೆಲ ಭಾಗಗಳು ಸವಕಳಿಯಾಗುವುವು, ಕೆಲವು ದುರಸ್ಥಿಗೆ ಒಳಪಡುವವು ಮತ್ತು ಕೆಲ ಯಂತ್ರಗಳ ತಂತ್ರಜ್ಞಾನ ಹಳೆಯದಾಗುವುದು. ಈ ಎಲ್ಲಾ ಪ್ರಕ್ರಿಯೆಯನ್ನು ಸವಕಳಿ ಅಥವಾ ಬಂಡವಾಳ ಅನುಭೋಗ ವೆಚ್ಚ ಎನ್ನುವರು. ಆದ್ದರಿಂದ, ಇವುಗಳ ಮರುಸ್ಥಾಪನೆಗೆ ಒಂದಷ್ಟು ಹಣವನ್ನು ತೆಗೆದಿಡಬೇಕಾಗುತ್ತದೆ. ಇದನ್ನೇ ಸವಕಳಿ ವೆಚ್ಚ ಎನುತ್ತೇವೆ. ಎನ್. ಎನ್. ಪಿ. ಯನ್ನು ಪಡೆಯಲು ಜಿ.ಎನ್.ಪಿ.ಯಿಂದ ಸವಕಳಿ ವೆಚ್ಚವನ್ನು ಕಳೆಯಬೇಕು. ನಿವ್ವಳ ಪದದ ಅರ್ಥವೆಂದರೆ ಸವಕಳಿ ವೆಚ್ಚವನ್ನು ಪ್ರತಿನಿಧಿಸುವ ಒಟ್ಟು ಉತ್ಪನ್ನದ ಭಾಗವನ್ನು ಹೊರಗಡುವುದಾಗಿದೆ. ಆದ್ದರಿಂದ ಎನ್. ಎನ್. ಪಿ = ಜಿ. ಎನ್. ಪಿ - ಸವಕಳಿ ವೆಚ್ಚ ಆಗಿರುತ್ತದೆ.

## 3) **ಒಟ್ಟು ದೇಶೀಯ ಉತ್ಪನ್ನ (ಜಿ.ಡಿ.ಪಿ):**

ದೇಶದ ಗಡಿಯೊಳಗಿನ ಸಂಪನ್ಮೂಲವನ್ನು ಬಳಸಿಕೊಂಡು ಉತ್ಪಾದನಾಂಗಗಳು ಸೃಷ್ಟಿಸಿದ ಆದಾಯವನ್ನು ದೇಶಿಯ ಆದಾಯ ಅಥವಾ ದೇಶಿಯ ಉತ್ಪನ್ನ ಎನ್ನುವರು. ಜಿ.ಡಿ.ಪಿಯು ಒಳಗೊಂಡಿರುವ ಅಂಶಗಳೆಂದರೆ 1) ಕೂಲಿ ಮತ್ತು ಸಂಬಳ 2) ಮನೆಯ ಬಾಡಿಗೆಯು ಸೇರಿದಂತೆ ಬಾಡಿಗೆ ಆದಾಯ 3) ಬಡ್ಡಿ 4) ಲಾಭಾಂಶ 5) ಹಂಚಿಕೆಯಾಗದ ಕಂಪನಿಗಳ ಲಾಭವು ಸೇರಿದಂತೆ ಸಾರ್ವಜನಿಕ ಉದ್ದಿಮೆಗಳ ಹೆಚ್ಚುವರಿ 6) ನೋಂದಾಯಿತವಲ್ಲದ ಉದ್ದಿಮೆಗಳು, ಸ್ವ- ಉದ್ಯೋಗದಲ್ಲಿ ತೊಡಗಿರುವವರ, ಪಾಲುದಾರ

ಸಂಸ್ಥೆಗಳ ಲಾಭವನ್ನು ಸೂಚಿಸುವ ಮಿಶ್ರ ಆದಾಯ 7) ನೇರ ತೆರಿಗೆಗಳು.ಒಟ್ಟು ದೇಶೀಯ ಉತ್ಪನ್ನ ಅಥವಾ ಆದಾಯವು ವಿದೇಶದಿಂದ ಗಳಿಸಿದ ಆದಾಯವನ್ನು ಒಳಗೊಳ್ಳುವುದಿಲ್ಲವಾದ್ದರಿಂದ ಇದನ್ನು ಕೆಳಕಂಡಂತೆ ವ್ಯಕ್ತಪಡಿಸಬಹುದು.

ದೇಶೀಯ ಆದಾಯ = ರಾಷ್ಟ್ರೀಯ ಆದಾಯ - ನಿವ್ವಳ ವಿದೇಶಿ ಆದಾಯ

ದೇಶೀಯ ಆದಾಯ ಮತ್ತು ರಾಷ್ಟ್ರೀಯ ಆದಾಯದ ನಡುವಿನ ವ್ಯತ್ಯಾಸವೇ ನಿವ್ವಳ ವಿದೇಶಿ ಆದಾಯವಾಗಿದ್ದು, ಇದು ಧನಾತ್ಮಕ ಅಥವಾ ಋಣಾತ್ಮಕವಾಗಿರಬಹುದು. ಆಮದುಗಳಿಗಿಂತ ರಫ್ತುಗಳು ಹೆಚ್ಚಾಗಿದ್ದರೆ, ನಿವ್ವಳ ವಿದೇಶಿ ಆದಾಯವು ಧನಾತ್ಮಕವಾಗಿರುವುದು. ಇಂತಹ ಸನ್ನಿವೇಶದಲ್ಲಿ ರಾಷ್ಟ್ರೀಯ ಆದಾಯ ದೇಶೀಯ ಆದಾಯಕ್ಕಿಂತ ಅಧಿಕವಾಗಿರುವುದು. ಮತ್ತೊಂದೆಡೆ ಯಾವಾಗ ರಫ್ತುಗಿಂತ ಆಮದು ಹೆಚ್ಚಾಗುವುದೋ ಆಗ ನಿವ್ವಳ ವಿದೇಶಿ ಆದಾಯ ಋಣಾತ್ಮಕವಾಗುವುದು ಮತ್ತು ರಾಷ್ಟ್ರೀಯ ಆದಾಯ ದೇಶೀಯ ಆದಾಯಕ್ಕಿಂತ ಕಡಿಮೆ ಇರುವುದು.

**4) ವೈಯಕ್ತಿಕ ಆದಾಯ (ಪಿ. ಐ):**

ಒಂದು ವರ್ಷದ ಅವಧಿಯಲ್ಲಿ ನೇರ ತೆರಿಗೆ ಪಾವತಿಸುವ ಮುನ್ನ ರಾಷ್ಟ್ರದ ವ್ಯಕ್ತಿಗಳು ಎಲ್ಲಾ ಮೂಲಗಳಿಂದ ಪಡೆಯುವ ಒಟ್ಟು ಆದಾಯವೇ ವೈಯಕ್ತಿಕ ಆದಾಯ. ಎಲ್ಲಾ ರಾಷ್ಟ್ರೀಯ ಆದಾಯ ಅನುಭೋಗಕ್ಕೆ ಲಭವಿರುವುದಿಲ್ಲ. ವೈಯಕ್ತಿಕ ಆದಾಯ ರಾಷ್ಟ್ರೀಯ ಆದಾಯಕ್ಕಿಂತ ಭಿನ್ನವಾಗಿರುವುದು. ವೈಯಕ್ತಿಕ ಆದಾಯವನ್ನು ಕಂಡುಹಿಡಿಯಲು ಕೆಲವು ಅಂಶಗಳನ್ನು ರಾಷ್ಟ್ರೀಯ ಆದಾಯದಿಂದ ಕಳೆಯಬೇಕಾಗುವುದು. ಉದಾಹರಣೆಗೆ ಕಂಪನಿಗಳು ಲಾಭಾಂಶವನ್ನು ಘೋಷಿಸುವುದಕ್ಕಿಂತ ಮುನ್ನ ಕಂಪನಿಯ ಲಾಭದಿಂದ ಆದಾಯ ತೆರಿಗೆಯನ್ನು ಕಳೆಯಬೇಕು. ಅದೇ ರೀತಿ ವೈಯಕ್ತಿಕ ಸಂಬಳದಾರರು ಮತ್ತು ಕೂಲಿಗಳಿಸುವವರು ತಮ್ಮ ಆದಾಯದ ನಿರ್ದಿಷ್ಟ ಶೇಕಡಾವಾರನ್ನು ಸಾಮಾಜಿಕ ಭದ್ರತಾ ಕೊಡುಗೆಗೆ ಪಾವತಿಸಬೇಕು. ಆ ಮಟ್ಟದವರೆಗೆ ಸಂಬಳದಾರರಿಗೆ ಮತ್ತು ಕೂಲಿದಾರರಿಗೆ ಆದಾಯವು ಕಡಿತವಾಗುತ್ತದೆ. ಇದಕ್ಕೆ ವಿರುದ್ಧವಾಗಿ ಸರ್ಕಾರವು ಹಲವು ಸಾಮಾಜಿಕ ಭದ್ರತಾ ಸೌಲಭ್ಯವಾದ ನಿರುದ್ಯೋಗ ಭತ್ಯೆ ವೃದ್ಧಾಪ್ಯ ವೇತನ ಇತ್ಯಾದಿಗಳನ್ನು ನೀಡುತ್ತದೆ.

ಈ ಪಾವತಿಗಳು ಸರ್ಕಾರದಿಂದ ವ್ಯಕ್ತಿಗಳಿಗೆ ಅಥವಾ ಕಂಪನಿಗಳಿಗೆ ಮತ್ತು ವ್ಯಕ್ತಿಗಳಿಂದ ಅಥವಾ ಕಂಪನಿಗಳಿಂದ ಸರ್ಕಾರಕ್ಕೆ ವರ್ಗಾವಣೆಯಾಗುವುದರಿಂದ ಇವುಗಳನ್ನು ವರ್ಗಾವಣಾ ಪಾವತಿಗಳು ಎನ್ನುತ್ತೇವೆ.

ಆದ್ದರಿಂದ ವೈಯಕ್ತಿಕ ಆದಾಯ = ರಾಷ್ಟ್ರೀಯ ಆದಾಯ-ಕಂಪನಿ ಆದಾಯ ತೆರಿಗೆ ಹಂಚಿಕೆಯಾಗದ ಕಂಪನಿ ಲಾಭ - ಸಾಮಾಜಿಕ ಭದ್ರತಾ ಕೊಡುಗೆಗಳು + ವರ್ಗಾವಣಾ ಗಳಿಕೆಗಳು.

ವೈಯಕ್ತಿಕ ಆದಾಯದ ಪರಿಕಲ್ಪನೆ ಅತ್ಯಂತ ಉಪಯುಕ್ತವಾಗಿದೆ. ಇದರ ನೆರವಿನಿಂದ ಆರ್ಥಿಕತೆಯ ಕುಟುಂಬಗಳ ಕೊಂಡುಕೊಳ್ಳುವ ಶಕ್ತಿಯನ್ನು ಅಂದಾಜು ಮಾಡಬಹುದು.

ಈ ಪರಿಕಲ್ಪನೆಯ ಕೊರತೆಯೆಂದರೆ ಇದು ನಿಖರವಾಗಿ ಲಭ್ಯವಿರುವ ಅಥವಾ ವಿನಿಯೋಗಿಸಬಹುದಾದ ವೈಯಕ್ತಿಕ ಆದಾಯದ ಹಣದ ಮೊತ್ತವನ್ನು ತಿಳಿಸುವುದಿಲ್ಲ.

**5) ವಿನಿಯೋಗಿಸಬಹುದಾದ ವೈಯಕ್ತಿಕ ಆದಾಯ (ಡಿ. ಪಿ. ಐ):**

ವಿನಿಯೋಗಿಸಬಹುದಾದ ಆದಾಯ ಅಥವಾ ವೈಯಕ್ತಿಕ ಆದಾಯವೆಂದರೆ ವ್ಯಕ್ತಿಗಳ ಮತ್ತು ಕುಟುಂಬಗಳ ಅನುಭೋಗಕ್ಕೆ ಖರ್ಚು ಮಾಡಲು ಲಭ್ಯವಿರುವ ನೈಜ ಆದಾಯವಾಗಿದೆ. ಸಂಪೂರ್ಣ ವೈಯಕ್ತಿಕ ಆದಾಯವನ್ನು ಅನುಭೋಗಕ್ಕೆ ಖರ್ಚು ಮಾಡಲು ಸಾಧ್ಯವಿಲ್ಲ. ಏಕೆಂದರೆ ಇದು ವೈಯಕ್ತಿಕ ನೇರ ತೆರಿಗೆಯನ್ನು ಪಾವತಿ ಮಾಡುವುದಕ್ಕಿಂತ ಮುಂಚಿನ ಆದಾಯವಾಗಿರುತ್ತದೆ. ಆದ್ದರಿಂದ ವಿನಿಯೋಗಿಸಬಹುದಾದ ಆದಾಯವನ್ನು ಪಡೆಯಲು ವೈಯಕ್ತಿಕ ಆದಾಯದಿಂದ ನೇರ ತೆರಿಗೆಯನ್ನು ಕಳೆಯಬೇಕಾಗುತ್ತದೆ.

ಆದ್ದರಿಂದ, ವಿನಿಯೋಗಿಸಬಹುದಾದ ವೈಯಕ್ತಿಕ ಆದಾಯ = ವೈಯಕ್ತಿಕ ಆದಾಯ – ನೇರ ತೆರಿಗೆ.

ಆದರೆ, ವ್ಯಕ್ತಿಗಳು ಆದಾಯವನ್ನು ಸಂಪೂರ್ಣವಾಗಿ ವೆಚ್ಚ ಮಾಡದೇ, ಸ್ವಲ್ಪಭಾಗವನ್ನು ಉಳಿತಾಯ ಮಾಡುತ್ತಾರೆ, ಆದ್ದರಿಂದ, ವಿನಿಯೋಗಿಸಬಹುದಾದ ಆದಾಯ = ಅನುಭೋಗದ ವೆಚ್ಚ + ಉಳಿತಾಯ ವೆಚ್ಚ ಆಗಿರುತ್ತದೆ.

2. **ತಲಾದಾಯ:**

ಒಂದು ರಾಷ್ಟ್ರದ ಪ್ರತಿಯೊಬ್ಬ ವ್ಯಕ್ತಿಯ ಒಂದು ವರ್ಷದ ಸರಾಸರಿ ಆದಾಯವನ್ನು ತಲಾದಾಯ ಎನ್ನುವರು. ಪ್ರಸ್ತುತ ಬೆಲೆಗಳಲ್ಲಿ ತಲಾದಾಯವನ್ನು ಲೆಕ್ಕ ಹಾಕಲು ಒಂದು ರಾಷ್ಟ್ರದ ಆದಾಯವನ್ನು ಆಯಾ ವರ್ಷದ ಜನಸಂಖ್ಯೆಯಿಂದ ಭಾಗಿಸಬೇಕು.

ಅಂದರೆ ತಲಾ ಆದಾಯ = ಒಟ್ಟು ರಾಷ್ಟ್ರೀಯ ಆದಾಯ ಒಟ್ಟು ಜನಸಂಖ್ಯೆ

ತಲಾ ಆದಾಯವು ಜನರ ಸರಾಸರಿ ಆದಾಯ ಮತ್ತು ಜೀವನ ಮಟ್ಟವನ್ನು ತಿಳಿಯಲು ನೆರವಾಗುವುದು. ಆದರೆ, ಇದು ಹೆಚ್ಚು ನೈಜವಾಗಿಲ್ಲ, ಏಕೆಂದರೆ ರಾಷ್ಟ್ರೀಯ ಆದಾಯದಲ್ಲಿನ ಅಸಮಾನ ಹಂಚಿಕೆಯ ಕಾರಣದಿಂದಾಗಿ ತಲಾ ಆದಾಯದ ಹೆಚ್ಚಿನ ಭಾಗವು ಸಮಾಜದ ಶ್ರೀಮಂತವರ್ಗಗಳಿಗೆ ಹಂಚಿಕೆಯಾಗಿದೆ, ಹಾಗಾಗಿ ಸಾಮಾನ್ಯ ಜನರು ತಲಾದಾಯಕ್ಕಿಂತ ಕಡಿಮೆ ನೈಜ ಆದಾಯವನ್ನು ಗಳಿಸುತ್ತಾರೆ.

**ರಾಷ್ಟ್ರೀಯ ಆದಾಯದ ಮಾಪನದ ವಿಧಾನಗಳು:**

ರಾಷ್ಟ್ರೀಯ ಆದಾಯವನ್ನು ಮಾಪನ ಮಾಡಲು ನಾಲ್ಕು ವಿಧಾನಗಳಿವೆ. ಅವುಗಳೆಂದರೆ 1) ಉತ್ಪನ್ನ ವಿಧಾನ 2) ಆದಾಯ ವಿಧಾನ 3) ವೆಚ್ಚದ ವಿಧಾನ 4)

ಮೌಲ್ಯವರ್ಧಿತ ವಿಧಾನ. ಈ ವಿಧಾನಗಳ ಬಳಕೆ ದೇಶದಲ್ಲಿನ ಅಂಕಿ ಅಂಶಗಳ ಲಭ್ಯತೆ ಮತ್ತು ರಾಷ್ಟ್ರೀಯ ಆದಾಯದ ಲೆಕ್ಕಾಚಾರದ ಉದ್ದೇಶವನ್ನು ಅವಲಂಬಿಸಿದೆ.

**1) ಉತ್ಪನ್ನ ವಿಧಾನ:**

ಉತ್ಪನ್ನ ವಿಧಾನದಲ್ಲಿ, ಯಾವುದೇ ರಾಷ್ಟ್ರದಲ್ಲಿ ನಿರ್ದಿಷ್ಟ ವರ್ಷದಲ್ಲಿ ಉತ್ಪಾದನೆಯಾದ ಎಲ್ಲಾ ಸರಕು ಮತ್ತು ಸೇವೆಗಳ ಅಂತಿಮ ಮಾರುಕಟ್ಟೆ ಮೌಲ್ಯವನ್ನು ಲೆಕ್ಕಾಚಾರ ಮಾಡಲಾಗುತ್ತದೆ. ದ್ವಿಗಣನೆಯನ್ನು ತಪ್ಪಿಸಲು, ಕೇವಲ ಅಂತಿಮ ಸರಕು ಮತ್ತು ಸೇವೆಗಳನ್ನು ಮಾತ್ರ ಪರಿಗಣನೆ ಮಾಡಲಾಗುತ್ತದೆ. ಒಂದು ಉದ್ಯಮದ ಅಂತಿಮ ಸರಕು ಮತ್ತೊಂದು ಉದ್ಯಮಕ್ಕೆ ಮಧ್ಯವರ್ತಿ ಸರಕಾಗಬಹುದು. ಮಧ್ಯವರ್ತಿ ಸರಕು ಎಂದರೆ ಉತ್ಪಾದನಾ ಪ್ರಕ್ರಿಯೆಯ ಮುಂದಿನ ಹಂತದಲ್ಲಿ ಬಳಸಲ್ಪಡುವ ಸರಕಾಗಿದೆ. ಉದಾಹರಣೆಗೆ ಒಂದು ಉದ್ಯಮಕ್ಕೆ ಉಕ್ಕು ಅಂತಿಮ ಸರಕಾದರೆ, ಮತ್ತೊಂದು ಉದ್ಯಮದಲ್ಲಿ ಅದನ್ನು ಉಕ್ಕಿನ ಪ್ಲೇಟ್ ತಯಾರಿಸಲು ಕಚ್ಚಾ ಸರಕಾಗಿ ಬಳಸಲಾಗುತ್ತದೆ. ಆದ್ದರಿಂದ, ಕೇವಲ ಅಂತಿಮ ಸರಕು ಮತ್ತು ಸೇವೆಗಳನ್ನು ಮಾತ್ರ ಪರಿಗಣಿಸಲಾಗುತ್ತದೆ ಮತ್ತು ಮಧ್ಯವರ್ತಿ ಸರಕು ಮತ್ತು ಸೇವೆಗಳನ್ನು ಕೈ ಬಿಡಲಾಗುತ್ತದೆ.

ದ್ವಿಗಣನೆಯ ಸಮಸ್ಯೆಯನ್ನು ತಪ್ಪಿಸಲು ಮೌಲ್ಯವರ್ಧಿತ ವಿಧಾನ ಬಳಕೆಯಲ್ಲಿದೆ. ಈ ಮೌಲ್ಯವರ್ಧಿತ ವಿಧಾನವು ಉತ್ಪಾದನೆಯ ಪ್ರತಿ ಹಂತದಲ್ಲಿ ಸರಕಿನ ಮೌಲ್ಯವು ಎಷ್ಟು ಹೆಚ್ಚಾಯಿತು ಎಂಬುದನ್ನು ಮಾತ್ರ ಪರಿಗಣಿಸುತ್ತದೆಯೇ ಹೊರತು ಒಂದು ಸರಕಿನ ಒಟ್ಟು ಮೌಲ್ಯವನ್ನು ಪರಿಗಣಿಸುವುದಿಲ್ಲ.

**2) ಆದಾಯದ ವಿಧಾನ:**

ಆದಾಯದ ವಿಧಾನದಲ್ಲಿ ಉತ್ಪಾದನಾಂಗಗಳ ಆದಾಯದ ಹರಿವಾಗಿ ರಾಷ್ಟ್ರೀಯ ಆದಾಯವನ್ನು ಮಾಪನ ಮಾಡುವರು. ಎಲ್ಲಾ ಉತ್ಪಾದನಾಂಗಗಳ ಒಂದು ವರ್ಷದ ಗಳಿಕೆಯ ನಿವ್ವಳ ಆದಾಯವನ್ನು ಅಂದರೆ, ಕೂಲಿ ಮತ್ತು ಸಂಬಳ (ಕಾರ್ಮಿಕರಿಗೆ), ಬಡ್ಡಿ (ಬಂಡವಾಳದಾರರಿಗೆ), ಗೇಣಿ (ಭೂಮಿ) ಮತ್ತು ಲಾಭ (ಉದ್ಯಮ ಸಾಹಸಿಗರಿಗೆ) ವನ್ನು ಒಟ್ಟಾಗಿ ಸೇರಿಸಿದಾಗ ಆದಾಯದ ವಿಧಾನದಲ್ಲಿ ರಾಷ್ಟ್ರೀಯ ಆದಾಯ ದೊರೆಯುತ್ತದೆ. ವರ್ಗಾವಣೆ ಗಳಿಕೆ ರೂಪದಲ್ಲಿ ಪಡೆಯುವ ಆದಾಯವನ್ನು ಆದಾಯದ ವಿಧಾನದಲ್ಲಿ ಸೇರ್ಪಡೆಗೊಳಿಸುವುದಿಲ್ಲ.

**3) ವೆಚ್ಚದ ವಿಧಾನ:**

ವೆಚ್ಚದ ವಿಧಾನದಲ್ಲಿ ರಾಷ್ಟ್ರೀಯ ಆದಾಯವನ್ನು ವೆಚ್ಚದ ಹರಿವಾಗಿ ಮಾಪನ ಮಾಡಲಾಗಿದೆ. ಒಂದು ವರ್ಷದಲ್ಲಿ ವ್ಯಕ್ತಿಗಳು, ಸರ್ಕಾರ ಮತ್ತು ಖಾಸಗಿ ಉದ್ದಿಮೆಗಳು ಮಾಡುವ ಒಟ್ಟು ವೆಚ್ಚ, ಒಟ್ಟು ಬಂಡವಾಳ ಸಂಚಯನ (ಸರ್ಕಾರ ಮತ್ತು ಖಾಸಗಿ ಹೂಡಿಕೆ) ಮತ್ತು ನಿವ್ವಳ ರಫ್ತನ್ನು ಸೇರಿಸಿದರೆ ನಮಗೆ ವೆಚ್ಚದ ವಿಧಾನದ ರಾಷ್ಟ್ರೀಯ ಆದಾಯ ದೊರೆಯುವುದು. ವೆಚ್ಚದ ವಿಧಾನದಲ್ಲಿ ರಾಷ್ಟ್ರೀಯ ಆದಾಯವನ್ನು ಅಂದಾಜು ಮಾಡಲು

ಒಂದು ನಿರ್ದಿಷ್ಟ ವರ್ಷದಲ್ಲಿ ಉತ್ಪಾದಿಸಲಾದ ಸರಕು ಮತ್ತು ಸೇವೆಗಳನ್ನು ಮಾತ್ರ ಪರಿಗಣಿಸುವರು. ಆದ್ದರಿಂದ ಬಳಸಿರುವ ವಸ್ತುಗಳು, ಪೇರು ಮತ್ತು ಸಾಲಪತ್ರಗಳು, ಸರ್ಕಾರದ ವರ್ಗಾವಣೆ ಪಾವತಿ ವೆಚ್ಚಗಳು, ಮಧ್ಯವರ್ತಿ ಸರಕುಗಳ ಮೇಲಿನ ವೆಚ್ಚವನ್ನು ವೆಚ್ಚ ವಿಧಾನದ ರಾಷ್ಟ್ರೀಯ ಆದಾಯದ ಅಂದಾಜಿನಲ್ಲಿ ಸೇರಿಸಲಾಗುವುದಿಲ್ಲ.

### 4) ಮೌಲ್ಯವರ್ಧಿತ ವಿಧಾನ:

ರಾಷ್ಟ್ರೀಯ ಆದಾಯ ಮಾಪನ ಮಾಡುವ ಮತ್ತೊಂದು ವಿಧಾನವು ಮೌಲ್ಯವರ್ಧಿತ ವಿಧಾನವಾಗಿದೆ. ಮೌಲ್ಯವರ್ಧಿತ ವಿಧಾನದಲ್ಲಿ ಕೈಗಾರಿಕೆಗಳ ಉತ್ಪಾದನೆಯ ಪ್ರತಿ ಹಂತದ ಉತ್ಪನ್ನ ಮೌಲ್ಯ ಮತ್ತು ಆದಾನ ಮೌಲ್ಯದಲ್ಲಿನ ವ್ಯತ್ಯಾಸವನ್ನು ಮಾತ್ರ ಸೇರಿಸಲಾಗುವುದು. ಈ ರೀತಿ ಎಲ್ಲಾ ಕೈಗಾರಿಕೆಗಳ ಎಲ್ಲಾ ಹಂತಗಳಲ್ಲಿನ ವ್ಯತ್ಯಾಸವನ್ನು ಆರ್ಥಿಕತೆಯಲ್ಲಿ ಸೇರಿಸಿದಾಗ ಒಟ್ಟು ದೇಶಿಯ ಉತ್ಪನ್ನ ದೊರಕುತ್ತದೆ.

## ರಾಷ್ಟ್ರೀಯ ಆದಾಯದ ಮಾಪನದಲ್ಲಿನ ತೊಡಕುಗಳು/ ಸಮಸ್ಯೆಗಳು:

ರಾಷ್ಟ್ರೀಯ ಆದಾಯದ ಮಾಪನದಲ್ಲಿ ಹಲವು ಪಾರಿಭಾಷಿಕ ಮತ್ತು ಸಂಖ್ಯಾಶಾಸ್ತ್ರೀಯ ತೊಡಕುಗಳಿವೆ. ಈ ಸಮಸ್ಯೆಗಳು ಅಭಿವೃದ್ಧಿ ಹೊಂದಿದ ಅರ್ಥವ್ಯವಸ್ಥೆಗಳಿಗಿಂತ ಅಭಿವೃದ್ಧಿಶೀಲ ಅರ್ಥವ್ಯವಸ್ಥೆಗಳಲ್ಲಿ ಪ್ರಧಾನವಾಗಿವೆ. ರಾಷ್ಟ್ರೀಯ ಆದಾಯದ ಲೆಕ್ಕಾಚಾರದಲ್ಲಿನ ಪ್ರಮುಖ ತೊಡಕುಗಳೆಂದರೆ

### 1. ನಂಬಲಾರ್ಹ ಅಂಕಿ ಅಂಶಗಳ ಕೊರತೆ:

ಭಾರತವು ಸೇರಿದಂತೆ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ನಾಲ್ಕನೇ ಒಂದರಷ್ಟು ಜನರು ಇನ್ನೂ ಅಶಿಕ್ಷಿತರಿದ್ದಾರೆ. ಇವರಲ್ಲಿ ಬಹಳಷ್ಟು ಜನರಿಗೆ, ಲೆಕ್ಕಪತ್ರಗಳನ್ನಿಡುವುದು ಮತ್ತು ತೆರಿಗೆ ಸಲ್ಲಿಕೆಗಳ ಬಗ್ಗೆ ಪರಿಜ್ಞಾನವಿರುವುದಿಲ್ಲ. ಇನ್ನೂ ಕೆಲವರು ಉದ್ದೇಶಪೂರ್ವಕವಾಗಿ ತೆರಿಗೆ ತಪ್ಪಿಸಿಕೊಳ್ಳುವುದು ಮತ್ತು ಅವರ ವ್ಯವಹಾರದ ಬಗ್ಗೆ ಸರಿಯಾದ ಲೆಕ್ಕವನ್ನು ನೀಡುವುದಿಲ್ಲ. ಮೇಲಾಗಿ ಸಣ್ಣ ಉತ್ಪಾದಕರು ಮತ್ತು ವ್ಯಾಪಾರಿಗಳು ತಮ್ಮ ವ್ಯವಹಾರದ ಲೆಕ್ಕವನ್ನು ನಿರ್ವಹಿಸುವುದಿಲ್ಲ. ಹಾಗಾಗಿ ಈ ಮೂಲಗಳಿಂದ ಸಂಗ್ರಹಿಸಿದ ರಾಷ್ಟ್ರೀಯ ಆದಾಯದ ಅಂಕಿ ಅಂಶಗಳು ಊಹಾತ್ಮಕ ಮತ್ತು ತಪ್ಪಾಗಿರುತ್ತವೆ.

### 2. ಸಾಟಿ ವಿನಿಮಯ ಪದ್ಧತಿಯ ಅಸ್ತಿತ್ವ:

ಅಭಿವೃದ್ದಿಶೀಲ ಆರ್ಥಿಕತೆಗಳ ಗ್ರಾಮೀಣ ಪ್ರದೇಶಗಳಲ್ಲಿ ಈಗಲೂ ಸಾಟಿ ವಿನಿಮಯ ಪದ್ಧತಿ ಅಸ್ತಿತ್ವದಲ್ಲಿದೆ. ಹೆಚ್ಚಿನ ಉತ್ಪಾದನೆಯ ಮಾರುಕಟ್ಟೆಗೆ ಬರುವುದಿಲ್ಲವಾದ್ದರಿಂದ ಸರಕುಗಳ ಹಣದ ಮೌಲ್ಯಮಾಪನ ಕಷ್ಟಕರವಾಗುತ್ತದೆ. ಅಲ್ಲದೇ ಬಡ ರೈತರು ತಾವು ಬೆಳೆದ ಉತ್ಪನ್ನದ ಹೆಚ್ಚಿನ ಭಾಗವನ್ನು ಸ್ವಂತ ಅನುಭೋಗಕ್ಕೆ ಬಳಸುವುದರಿಂದ ಇದು ಲೆಕ್ಕಕ್ಕೆ ದೊರಕುವುದಿಲ್ಲ. ಅಲ್ಲದೇ ಮನೆಯಲ್ಲಿ ಗೃಹಿಣಿಯರು ಸಲ್ಲಿಸುವ ಸೇವೆಯನ್ನು

ಪರಿಗಣಿಸುವುದಿಲ್ಲ. ಹಲವು ಉಚಿತ ಸೇವೆಗಳು ರಾಷ್ಟ್ರೀಯ ಆದಾಯದ ಲೆಕ್ಕಾಚಾರದಲ್ಲಿ ಪರಿಗಣಿಸುವುದಿಲ್ಲ. ಈ ಸಮಸ್ಯೆಯನ್ನು ಸಾಟಿ ವಿನಿಮಯವಾದ ಸರಕು, ಸ್ವಂತ ಅನುಭೋಗಕ್ಕೆ ಇಟ್ಟುಕೊಂಡ ಸರಕು ಮತ್ತು ಗೃಹಿಣಿಯರ ಸೇವೆಗಳನ್ನು ಸೇರಿಸುವ ಮೂಲಕ ಸ್ವಲ್ಪ ಮಟ್ಟಿಗಾದರೂ ಕಡಿಮೆ ಮಾಡಬಹುದು. ಆದರೆ ಇದರ ನಂಬಲಾರ್ಹತೆಯು ಸದಾಸಂಶಯಾತ್ಮಕವಾಗಿರುತ್ತದೆ.

**3. ಮೌಲ್ಯದ ಅಂದಾಜಿನ ಸಮಸ್ಯೆ:**

ಅಭಿವೃದ್ಧಿಶೀಲ ಆರ್ಥಿಕತೆಗಳಲ್ಲಿ ಕೃಷಿಕರು, ಕುಶಲಕರ್ಮಿಗಳು ಮತ್ತು ಗುಡಿ ಕೈಗಾರಿಕೆಯ ಕಾರ್ಮಿಕರು ತಮ್ಮ ವ್ಯವಹಾರದ ಯಾವುದೇ ದಾಖಲೆಗಳನ್ನು ನಿರ್ವಹಿಸುವುದಿಲ್ಲ. ಆದ್ದರಿಂದ ಸರಕುಗಳ ಮೌಲ್ಯವನ್ನು ನಿಖರವಾಗಿ ಅಂದಾಜು ಮಾಡಲು ಸಾಧ್ಯವಾಗುವುದಿಲ್ಲ.

**3. ದ್ವಿಗಣನೆ:**

ರಾಷ್ಟ್ರೀಯ ಆದಾಯದ ಲೆಕ್ಕಾಚಾರದಲ್ಲಿ ದ್ವಿಗಣನೆ ಒಂದು ಪ್ರಮುಖ ಸಮಸ್ಯೆಯಾಗಿದೆ. ಒಂದು ಕೈಗಾರಿಕೆಯ ಅಂತಿಮ ಸರಕು ಮತ್ತೊಂದು ಕೈಗಾರಿಕೆಗೆ ಕಚ್ಚಾ ಸರಕಾಗುತ್ತದೆ. ಈ ಮಧ್ಯವರ್ತಿ ಸರಕುಗಳು ರಾಷ್ಟ್ರೀಯ ಆದಾಯದ ಲೆಕ್ಕಾಚಾರದಲ್ಲಿ ಸಮಸ್ಯೆಯನ್ನು ಸೃಷ್ಟಿಸಿವೆ. ಆದರೆ, ಅಂತಿಮ ಸರಕು ಮತ್ತು ಮಧ್ಯವರ್ತಿ ಸರಕು ಮತ್ತು ಸೇವೆಗಳ ನಡುವಿನ ವ್ಯತ್ಯಾಸ ತಿಳಿಯುವುದು ಕಷ್ಟಕರವಾಗಿದೆ. ಆದರೂ ಮೌಲ್ಯವರ್ಧಿತ ವಿಧಾನದ ಮೂಲಕ ದ್ವಿಗಣನೆ ಸಮಸ್ಯೆಯನ್ನು ತಪ್ಪಿಸಬಹುದು.

**4. ಅಕ್ರಮ ಆದಾಯ:**

ಕಪ್ಪು ಆರ್ಥಿಕತೆ ಅಥವಾ ಸಮಾನಾಂತರ ಆರ್ಥಿಕತೆಯು ಅಕ್ರಮ ಚಟುವಟಿಕೆಗಳು ಮತ್ತು ಕಾನೂನು ಬಾಹಿರ ವ್ಯವಹಾರವನ್ನು ಒಳಗೊಂಡಿದೆ. ಈ ಚಟುವಟಿಕೆಗಳು ಸಾಮಾಜಿಕವಾಗಿ ಮತ್ತು ಕಾನೂನುಬದ್ಧವಾಗಿ ಅಸಮ್ಮತವಾಗಿರುವುದರಿಂದ ಈ ಚಟುವಟಿಕೆಗಳನ್ನು ಲೆಕ್ಕಾಚಾರ ಮಾಡಲಾಗುವುದಿಲ್ಲ. ಉದಾಹರಣೆಗೆ ಮಾದಕವಸ್ತು, ಜೂಜಾಟ, ಕಳ್ಳ ಸಾಗಾಣಿಕೆ ಇತ್ಯಾದಿ. ಕೆಲ ವ್ಯವಹಾರಗಳು ತೆರಿಗೆಯನ್ನು ತಪ್ಪಿಸಿದರೆ, ಇದನ್ನು ಸರಕುಗಳ ಕಳ್ಳ ಸಾಗಾಣಿಕೆಯನ್ನು ಬೆಂಬಲಿಸುವುದು ಮತ್ತು ಇದು ಜಿ. ಡಿ. ಪಿಯ ಶೇ. 40 ರಷ್ಟು ಇದ್ದರೂ ಕೂಡ ಲೆಕ್ಕಚಾರಕ್ಕೆ ದೊರಕುವುದಿಲ್ಲ. ಈ ತೆರಿಗೆಗಳ್ಳತನವು ಕಪ್ಪು ಹಣದ ಉಗಮಕ್ಕೆ ಕಾರಣವಾಗಿದ್ದು, ಇದು ರಾಷ್ಟ್ರೀಯ ಆದಾಯದ ನೈಜ ಮೌಲ್ಯವನ್ನು ಕಡಿಮೆಯಾಗಿ ಅಂದಾಜಿಸುವುದು.

## ಅಭ್ಯಾಸ

**I. ಈ ಕೆಳಗಿನ ಪ್ರಶ್ನೆಗಳಿಗೆ ನಾಲ್ಕು ಪರ್ಯಾಯ ಉತ್ತರಗಳನ್ನು ಕೊಡಲಾಗಿದೆ ಅವುಗಳಲ್ಲಿ ಸೂಕ್ತವಾದ ಉತ್ತರವನ್ನು ಆರಿಸಿ ಬರೆಯಿರಿ.**

1. ರಾಷ್ಟ್ರೀಯ ಆದಾಯವು _______ ಅವಧಿಯಲ್ಲಿ ಉತ್ಪಾದಿತವಾಗುವ ಸರಕು ಸೇವೆಗಳ ಮೌಲ್ಯವಾಗಿದೆ.
   ಅ) ವಾರದ
   ಆ) ತಿಂಗಳಿನ
   ಇ) ವರ್ಷದ
   ಈ) ದಿನದ

2. ಮೌಲ್ಯವರ್ಧಿತ ವಿಧಾನವನ್ನು _______ ಸಮಸ್ಯೆ ಬಗೆಹರಿಸಲು ಬಳಸುವರು.
   ಅ) ದ್ವಿಗಣನೆ
   ಆ) ಅಕ್ರಮ ಆದಾಯ
   ಇ) ನಂಬಲಾರ್ಹವಾದ ಅಂಕಿ ಅಂಶಗಳ ಕೊರತೆ
   ಈ) ಮೌಲ್ಯದ ಅಂದಾಜಿನ ಸಮಸ್ಯೆ

3. ಒಟ್ಟು ರಾಷ್ಟ್ರೀಯ ಉತ್ಪನ್ನ - ಸವಕಳಿ ವೆಚ್ಚ = _______
   ಅ) ಜಿಡಿಪಿ
   ಆ)ಎನ್‌ಎನ್‌ಪಿ
   ಇ) ಪಿಸಿಐ
   ಈ) ಡಿಐ

4. ಒಂದು ವರ್ಷದಲ್ಲಿನ ರಾಷ್ಟ್ರದ ಜನರ ಸರಾಸರಿ ಆದಾಯವು _______ ಆಗಿದೆ.
   ಅ)ಪಿಐ
   ಆ)ಪಿಸಿಐ
   ಇ) ಡಿಐ
   ಈ) ಮೇಲಿನ ಯಾವುದೂ ಅಲ್ಲ

5. ರಾಷ್ಟ್ರೀಯ ಆದಾಯ - ನಿವ್ವಳ ವಿದೇಶಿ ಆದಾಯ = _______

   ಅ) ದೇಶೀಯ ಆದಾಯ
   ಆ) ವೈಯಕ್ತಿಕ ಆದಾಯ

   ಇ) ತಲಾದಾಯ

   ಈ) ಮೇಲಿನ ಯಾವುದೂ ಅಲ್ಲ

**II. ಈ ಕೆಳಗಿನ ವಾಕ್ಯಗಳಲ್ಲಿ ಖಾಲಿ ಬಿಟ್ಟ ಸ್ಥಳಗಳನ್ನು ತುಂಬಿರಿ.**

1. ರಾಷ್ಟ್ರೀಯ ಆದಾಯವನ್ನು ಎಲ್ಲಾ _______ ಸರಕು ಮತ್ತು ಸೇವೆಗಳ ಹಣದ ಮೌಲ್ಯದ ಮೂಲಕ ವ್ಯಕ್ತಪಡಿಸುವರು.
2. ರಾಷ್ಟ್ರೀಯ ಆದಾಯ _______ ಪರಿಕಲ್ಪನೆಯಾಗಿದೆ.
3. ಸರ್ಕಾರವು ನೀಡಿರುವ ಸಾಮಾಜಿಕ ಭದ್ರತೆಯನ್ನು _______ ಎನ್ನುವರು.
4. ವೆಚ್ಚದ ವಿಧಾನದಲ್ಲಿ, ರಾಷ್ಟ್ರೀಯ ಆದಾಯವನ್ನು _______ ಹರಿವಾಗಿ ಮಾಪನ ಮಾಡುವರು.
5. ಅನುಭೋಗ ವೆಚ್ಚ + ಉಳಿತಾಯದ ವೆಚ್ಚ = _______

**III. ಈ ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

1. ಆರ್ಥಿಕ ಅಭಿವೃದ್ಧಿಯನ್ನು ನಾವು ಹೇಗೆ ಮಾಪನ ಮಾಡುತ್ತೇವೆ?
2. ಜಿ. ಎನ್. ಪಿ. ಯನ್ನು ವಿಸ್ತರಿಸಿ.
3. ಎನ್. ಎನ್. ಪಿ. ಯನ್ನು ವಿಸ್ತರಿಸಿ.
4. ಎನ್. ಎನ್. ಪಿ.ಯಲ್ಲಿ ನಿವ್ವಳ ಪದದ ಅರ್ಥವೇನು?
5. ಭಾರತದಲ್ಲಿ ಹಣಕಾಸು ವರ್ಷ ಯಾವಾಗ ಪ್ರಾರಂಭವಾಗುತ್ತದೆ ಮತ್ತು ಕೊನೆಗೊಳ್ಳುತ್ತದೆ?

**IV. ಈ ಕೆಳಗಿನ ಪ್ರಶ್ನೆಗಳಿಗೆ ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿ.**

1. ರಾಷ್ಟ್ರೀಯ ಆದಾಯ ಎಂದರೇನು?
2. ರಾಷ್ಟ್ರೀಯ ಆದಾಯದ ಎರಡು ಉಪಯೋಗವನ್ನು ತಿಳಿಸಿ.
3. ವಿನಿಯೋಗಿಸಬಹುದಾದ ಆದಾಯ ಎಂದರೇನು?
4. ರಾಷ್ಟ್ರೀಯ ಆದಾಯವನ್ನು ಮಾಪನ ಮಾಡುವ ನಾಲ್ಕು ವಿಧಾನಗಳನ್ನು ಪಟ್ಟಿ ಮಾಡಿ.
5. ರಾಷ್ಟ್ರೀಯ ಆದಾಯದ ಲೆಕ್ಕಾಚಾರದಲ್ಲಿ ದ್ವಿಗಣನೆಯ ಸಮಸ್ಯೆ ಎಂದರೇನು?

**V. ಈ ಕೆಳಗಿನ ಪ್ರಶ್ನೆಗಳಿಗೆ ಎಂಟು ವಾಕ್ಯಗಳಲ್ಲಿ ಉತ್ತರಿಸಿ.**

1. ರಾಷ್ಟ್ರೀಯ ಆದಾಯದ ಲಕ್ಷಣಗಳನ್ನು ಚರ್ಚಿಸಿರಿ.
2. ರಾಷ್ಟ್ರೀಯ ಆದಾಯದ ಮಹತ್ವನ್ನು ವಿವರಿಸಿ.

3. ಜಿ. ಎನ್. ಪಿ. ಯ ಪರಿಭಾವನೆಯನ್ನು ವಿವರಿಸಿ.
4. ಜಿ. ಡಿ. ಪಿ.ಯನ್ನು ಕುರಿತು ಟಿಪ್ಪಣಿ ಬರೆಯಿರಿ.
5. ರಾಷ್ಟ್ರೀಯ ಆದಾಯದ ಮಾಪನದಲ್ಲಿನ ತೊಡಕುಗಳನ್ನು ಸಂಕ್ಷಿಪ್ತವಾಗಿ ಚರ್ಚಿಸಿ.

**ನಿಯೋಜಿತ ಕಾರ್ಯ:**

ವಿವಿಧ ಸರಕು ಮತ್ತು ಸೇವೆಗಳನ್ನು ಪಟ್ಟಿಮಾಡಿ ಮತ್ತು ಜಿ. ಡಿ. ಪಿ. ಗೆ ಅವುಗಳ ಕೊಡುಗೆಯನ್ನು ಕಂಡುಹಿಡಿಯಿರಿ.

ನಿಮ್ಮ ವಾಸಸ್ಥಳದಲ್ಲಿ ಕೆಲ ತೆರಿಗೆ ಪಾವತಿಸುವ ಕೆಲಜನರ ಮಾಹಿತಿಯನ್ನು ಸಂಗ್ರಹಿಸಿ ಮತ್ತು ಅವರು ವಿನಿಯೋಗಿಸುವ ಆದಾಯವನ್ನು ತಿಳಿಯಲು ಪ್ರಯತ್ನಿಸಿ.

## ಅಧ್ಯಾಯ-7: ವ್ಯಾಪಾರ ಆವರ್ತಗಳು

"ವ್ಯಾಪಾರದ ಆವರ್ತಗಳು ಸರಿಯಾದ ಪರಿಹಾರವು ಶೃಂಗವನ್ನು ನಿರ್ಮೂಲನೆ ಮಾಡಿ ನಮ್ಮನ್ನು ಶಾಶ್ವತವಾಗಿ ಅರೆಕುಸಿತದಲ್ಲಿ ಇಡುವುದಲ್ಲ; ಬದಲಾಗಿ ಕುಸಿತವನ್ನು ನಿರ್ಮೂಲನೆ ಮಾಡಿ ನಮ್ಮನ್ನು ಶಾಶ್ವತವಾಗಿ ಅರೆ ಶೃಂಗದಲ್ಲಿ ಕಾಪಾಡಿಕೊಳ್ಳುವುದರಲ್ಲಿದೆ".
**ಜಾನ್ ಮೇನಾರ್ಡ್ ಕೇನ್ಸ್**

### ಪೀಠಿಕೆ:

ಪ್ರತಿಯೊಂದು ಅರ್ಥವ್ಯವಸ್ಥೆಯ ಬೆಳವಣಿಗೆಯ ಪ್ರಕ್ರಿಯೆಯಲ್ಲಿ ಏರಿಳಿತಗಳಿಗೆ ಒಳಗಾಗುವುದು. ಸಹಜ. ದೀರ್ಘಾವಧಿ ಬೆಳವಣಿಗೆಯು ಸ್ಥಿರ ಮತ್ತು ನಿರಂತರವಾಗಿರುವಂತೆ ತೋರಿದರೂ ಸಹ, ಆರ್ಥಿಕತೆಯು ಅಲ್ಪಾವಧಿ ಏರಿಳಿತಗಳಿಗೆ ಒಳಗಾಗುತ್ತಿರುತ್ತದೆ. ಹಾಗೆಯೇ ಪ್ರತಿ ಏರುವಿಕೆಯು ಬೇಡಿಕೆ, ಮಾರಾಟ, ಆದಾಯ, ಲಾಭಗಳು, ಹೂಡಿಕೆ, ಉದ್ಯೋಗ, ನಿರೀಕ್ಷೆಗಳು ಇತ್ಯಾದಿಗಳಲ್ಲಿನ ಹೆಚ್ಚಳದ ಮೂಲಕ ವ್ಯಾಪಾರ ಸಮೃದ್ಧಿಯನ್ನು ಸುಧಾರಿಸಿದರೆ, ಪ್ರತಿ ಇಳಿಕೆಯು ಮೇಲಿನ ಎಲ್ಲಾ ಅಂಶಗಳನ್ನು ಕುಂಠಿತಗೊಳಿಸುತ್ತದೆ. ಏರುವಿಕೆಯು ವ್ಯಾಪಾರ ಮತ್ತು ಆರ್ಥಿಕತೆಯ ವಿಸ್ತರಣೆಗೆ ಕಾರಣವಾದರೆ, ಇಳಿಕೆಯು ಆರ್ಥಿಕತೆಯ ಸಂಕುಚಿತಕ್ಕೆ ಕಾರಣವಾಗುತ್ತದೆ. ಅನೇಕ ಆರ್ಥಿಕ ವ್ಯವಸ್ಥೆಗಳಲ್ಲಿ ಆರ್ಥಿಕ ಹಿಂಜರಿತವು ಮುಂದುವರಿದ ಕಾರಣದಿಂದ ಹಲವಾರು ವರ್ಷಗಳ ಮುಗ್ಗಟ್ಟಿನ ಸ್ಥಿತಿ ಎದುರಿಸಿದ ನಿದರ್ಶನಗಳಿವೆ. ಇದರ ಪರಿಣಾಮದಿಂದಾಗಿ ಜನರು ತೀವ್ರ ಕಷ್ಟ ಕಾರ್ಪಣ್ಯಗಳನ್ನು ಅನುಭವಿಸಿದ್ದಾರೆ. ಆರ್ಥಿಕ ಚಟುವಟಿಕೆಗಳಲ್ಲಿನ ಈ ಪರ್ಯಾಯ ವಿಸ್ತರಣೆ-ಸಂಕುಚನೆಯ ನಿಯಮಿತ ಚಲನೆಗಳನ್ನು

ವ್ಯಾಪಾರ ಅಥವಾ ಆರ್ಥಿಕ ಆವರ್ತಗಳೆಂದು ಕರೆಯುತ್ತೇವೆ. ವ್ಯಾಪಾರ ಆವರ್ತಗಳ ಪರಿಣಾಮಗಳು ವ್ಯಾಪಾರದ ಚಟುವಟಿಕೆಗಳಲ್ಲಿ ಮಾತ್ರವಲ್ಲದೇ ಇಡೀ ಆರ್ಥಿಕತೆಗೆ ಹರಡುತ್ತದೆ. ಹಾಗಾದರೆ ವ್ಯಾಪಾರ ಆವರ್ತಗಳೆಂದರೇನು? ವ್ಯಾಪಾರ ಆವರ್ತಗಳ ಲಕ್ಷಣಗಳೇನು? ವ್ಯಾಪಾರ ಆವರ್ತಗಳ ವಿಧಗಳಾವುವು? ವ್ಯಾಪಾರ ಆವರ್ತಗಳ ವಿವಿಧ ಹಂತಗಳಾವುವು? ಈ ಮೇಲಿನ ಎಲ್ಲಾ ಪ್ರಶ್ನೆಗಳಿಗೆ ಉತ್ತರವನ್ನು ಕಂಡುಕೊಳ್ಳುವುದು ಮತ್ತು ವ್ಯಾಪಾರ ಆವರ್ತಗಳ ಪರಿಕಲ್ಪನೆಯನ್ನು ಅರ್ಥಮಾಡಿಕೊಳ್ಳುವುದು ಈ ಅಧ್ಯಾಯದ ಉದ್ದೇಶವಾಗಿದೆ.

## ವ್ಯಾಪಾರ ಆವರ್ತದ ಅರ್ಥ ಮತ್ತು ವ್ಯಾಖ್ಯಾನ:

ವ್ಯಾಪಾರ ಆವರ್ತಗಳು ಬಹಳ ಸಂಕೀರ್ಣವಾದ ವಿದ್ಯಮಾನವಾಗಿವೆ. ಇವು ಆರ್ಥಿಕ ಚಟುವಟಿಕೆಗಳಲ್ಲಿನ ನಿರಂತರ ಏರಿಳಿತಗಳಿಗೆ ಸಂಬಂಧಿಸಿವೆ. ಆರ್ಥಿಕ ಆವರ್ತದಿಂದಾಗಿ ಆರ್ಥಿಕ ಚಲಕಗಳಲ್ಲಿ ಹಲವು ರೀತಿಯ ಬದಲಾವಣೆಗಳು ಉಂಟಾಗಿ ಅದರಿಂದ ವಿವಿಧ ರೀತಿಯ ಪರಿಣಾಮಗಳು ಗೋಚರಿಸುತ್ತವೆ.

ಜೆ. ಎಂ. ಕೇನ್ಸ್‌ರವರು ಆರ್ಥಿಕ ಆವರ್ತವು "ಏರುತ್ತಿರುವ ಬೆಲೆಗಳು ಮತ್ತು ಕಡಿಮೆ ನಿರುದ್ಯೋಗದಿಂದ ಕೂಡಿದ ಉತ್ತಮ ವ್ಯಾಪಾರದ ಅವಧಿ ಮತ್ತು ಪರ್ಯಾಯವಾಗಿ ಸಂಭವಿಸುವ ಇಳಿಯುತ್ತಿರುವ ಬೆಲೆಗಳು ಮತ್ತು ಅಧಿಕ ನಿರುದ್ಯೋಗದಿಂದ ಕೂಡಿದ ಕಷ್ಟದ ಅವಧಿಗಳನ್ನು ಒಳಗೊಂಡಿರುತ್ತದೆ" ಎಂದು ವ್ಯಾಖ್ಯಾನಿಸಿದ್ದಾರೆ.

ಫ್ರೆಡ್‌ರಿಕ್ ಬೆನ್‌ಹ್ಯಾಮ್‌ರವರು "ಆರ್ಥಿಕ ಆವರ್ತವನ್ನು ಒಂದು ಸಮೃದ್ಧತೆಯ ಕಾಲಾವಧಿಯನ್ನು ಮುಗ್ಗಟ್ಟಿನ ಅವಧಿಯು ಹಿಂಬಾಲಿಸುತ್ತದೆ; ಆರ್ಥಿಕ ಪ್ರಗತಿಯು ಕ್ರಮಬದ್ಧವಾಗಿರುವುದಿಲ್ಲ, ವ್ಯಾಪಾರವು ಕೆಲವು ಸಮಯದಲ್ಲಿ ಉತ್ತಮವಾಗಿರಬಹುದು ಮತ್ತು ಕೆಲ ಸಂದರ್ಭದಲ್ಲಿ ಕೆಟ್ಟದಾಗಿರಬಹುದು" ಎಂದು ವ್ಯಾಖ್ಯಾನಿಸಿದ್ದಾರೆ.

ಕ್ರೌಥರ್‌ರವರು "ವ್ಯಾಪಾರ ಆವರ್ತಗಳು ಒಂದೆಡೆ ನಿರುದ್ಯೋಗದಿಂದಾಗುವ ದುಃಖ, ವಿಪತ್ತು ಹಾಗೂ ಅಪಮಾನಗಳನ್ನು ವ್ಯಕ್ತಿಗತ ಬಡತನ ಹೆಚ್ಚಳದಿಂದ ಸಾಮಾಜಿಕ ಕ್ಷೋಭೆಗೆ ಕಾರಣವಾದರೆ, ಮತ್ತೊಂದೆಡೆ ಶ್ರಮ ಮತ್ತು ಬಂಡವಾಳದ ಆದರ್ಶ ಬಳಕೆಯ ವ್ಯರ್ಥದಿಂದಾದ ಸಂಪತ್ತಿನ ನಷ್ಟವನ್ನು ಪ್ರತಿನಿಧಿಸುತ್ತದೆ" ಎಂದು ಹೇಳಿದ್ದಾರೆ.

ಸಾಮಾನ್ಯವಾಗಿ, ಆರ್ಥಿಕ ಆವರ್ತಗಳೆಂದರೆ ಆರ್ಥಿಕ ಚಟುವಟಿಕೆಗಳ ಮಟ್ಟದಲ್ಲಿನ ಏರಿಕೆ ಮತ್ತು ಇಳಿಕೆಯ ಪುನರಾವರ್ತನೆಯಾಗಿದ್ದು, ಇವು ಹಲವು ವರ್ಷಗಳವರೆಗೆ ವಿಸ್ತರಿಸಬಹುದು. ಬ್ರಿಟಿಷ್ ಅರ್ಥಶಾಸ್ತ್ರಜ್ಞರು ಇದನ್ನು ವ್ಯಾಪಾರ ಚಕ್ರಗಳು ಎಂದು ಕರೆದರು. ಇದನ್ನು ಆರ್ಥಿಕ ಆವರ್ತಗಳು ಎಂದು ಸಹ ಕರೆಯಲಾಗುತ್ತದೆ.

## ಆರ್ಥಿಕ ಆವರ್ತಗಳ ಲಕ್ಷಣಗಳು:

ಆರ್ಥಿಕ ಆವರ್ತಗಳ ಪ್ರಮುಖ ಲಕ್ಷಣಗಳೆಂದರೆ

1. **ಆರ್ಥಿಕ ಆವರ್ತಗಳು ನಿಯಮಿತವಾಗಿ ಸಂಭವಿಸುತ್ತವೆ:** ಆರ್ಥಿಕ ಆವರ್ತಗಳು ಒಂದೇ ರೀತಿಯ ಕ್ರಮಬದ್ಧತೆಯನ್ನು ಹೊಂದಿರುವುದಿಲ್ಲ. ಪ್ರತಿಯೊಂದು ಆರ್ಥಿಕ ಆವರ್ತಗಳು ನಿರ್ದಿಷ್ಟ ಹಂತಗಳನ್ನು ಒಳಗೊಂಡಿರುತ್ತದೆಯಲ್ಲದೇ ಒಂದು ಆವರ್ತದಿಂದ ಮತ್ತೊಂದು ಆವರ್ತದ ನಡುವಿನ ಕಾಲಾವಧಿಯು 2 ರಿಂದ 12 ವರ್ಷಗಳವರೆಗೆ ನಿಯಮಿತ ಅಂತರದಲ್ಲಿ ಕಾರ್ಯನಿರ್ವಹಿಸುತ್ತದೆ.
2. **ಆರ್ಥಿಕ ಆವರ್ತಗಳು ಏಕಕಾಲಿಕತೆಯ ಲಕ್ಷಣ ಹೊಂದಿದೆ:** ಆರ್ಥಿಕ ಆವರ್ತಗಳು ಎಲ್ಲಾ ಕೈಗಾರಿಕೆಗಳಲ್ಲಿ ಮತ್ತು ಆರ್ಥಿಕತೆಯ ಎಲ್ಲಾ ವಲಯಗಳಲ್ಲಿ ಏಕ ಕಾಲದಲ್ಲಿ ಸಂಭವಿಸುತ್ತವೆ.

3. **ಸಂಚಿತತೆ ಮತ್ತು ಸ್ವಯಂ ಬಲಪಡಿಸಿಕೊಳ್ಳುವ ಗುಣ ಹೊಂದಿವೆ:** ಆರ್ಥಿಕ ಆವರ್ತಗಳ ಪ್ರಮುಖ ಲಕ್ಷಣವೆಂದರೆ ಇವುಗಳು ಸಂಚಿತತೆ ಮತ್ತು ಸ್ವಯಂಬಲಪಡಿಸಿಕೊಳ್ಳುತ್ತದೆ. ಆರ್ಥಿಕ ಚಟುವಟಿಕೆಗಳಲ್ಲಿನ ವಿಸ್ತರಣೆ ಮತ್ತು ಕುಗ್ಗುವಿಕೆಯ ಪರಿಣಾಮಗಳು ಸಂಚಿತತೆಯಾಗಿರುತ್ತದೆ.
4. **ಆರ್ಥಿಕ ಆವರ್ತಗಳು ಅಲೆಗಳೋಪಾದಿಯಲ್ಲಿ ಚಲಿಸುತ್ತವೆ:** ಆರ್ಥಿಕ ಚಲಕಗಳಾದ ಉದ್ಯೋಗ, ಹೂಡಿಕೆ, ವೆಚ್ಚ, ಹಣದುಬ್ಬರದ ದರ, ಒಟ್ಟು ರಾಷ್ಟ್ರೀಯ ಉತ್ಪನ್ನ ಮತ್ತು ಬೆಲೆಗಳ ಮಟ್ಟಗಳ ಏರಿಳಿತವು ಅಲೆಗಳೋಪಾದಿಯಲ್ಲಿ ನಿಯತಕಾಲಿಕವಾಗಿ ಸಂಭವಿಸುವುದನ್ನು ಗಮನಿಸಲಾಗಿದೆ.

5. **ಕೆಳಮುಖ ಮತ್ತು ಮೇಲ್ಮುಖ ಚಲನೆ:** ಆರ್ಥಿಕ ಆವರ್ತಗಳು ಆರ್ಥಿಕ ಚಟುವಟಿಕೆಗಳಲ್ಲಿನ ಕೆಳಮುಖ ಮತ್ತು ಮೇಲ್ಮುಖ ಚಲನೆಯ ಲಕ್ಷಣಗಳನ್ನು ಹೊಂದಿವೆ.
6. **ಇತರೆ ದೇಶಗಳಿಗೂ ವ್ಯಾಪಿಸುತ್ತದೆ:** ಆರ್ಥಿಕ ಆವರ್ತಗಳು ಅಂತರಾಷ್ಟ್ರೀಯ ಸ್ವರೂಪದ ಲಕ್ಷಣವನ್ನು ಹೊಂದಿದೆ. ಒಂದು ದೇಶದಲ್ಲಿ ಪ್ರಾರಂಭವಾದ ಆರ್ಥಿಕ ಏರಿಳಿತಗಳು ವ್ಯಾಪಾರದ ಮೂಲಕ ಇತರೆ ದೇಶಗಳಿಗೂ ವ್ಯಾಪಿಸುತ್ತವೆ.

7. **ಆವರ್ತಗಳ ಏರಿಳಿತವು ಪುನರಾವರ್ತನೆಗೊಳ್ಳುತ್ತವೆ:** ಆರ್ಥಿಕ ಆವರ್ತಗಳ ಏರಿಳಿತಗಳು ಪುನರಾವರ್ತನೆಯಾಗುವ ಲಕ್ಷಣವನ್ನು ಹೊಂದಿವೆ. ಆರ್ಥಿಕ ಆವರ್ತಗಳ ಸಂಭವಿಸುವಿಕೆಗೆ ಹೂಡಿಕೆದಾರರಲ್ಲಿನ ಅನಿಶ್ಚಿತತೆಗೆ ಕಾರಣವಾಗುತ್ತದೆ ಮತ್ತು ಇದು ಆರ್ಥಿಕ ಚಲಕಗಳನ್ನು ಮುನ್ನ ಅಂದಾಜು ಮಾಡಲು ಕಷ್ಟವಾಗಿಸುತ್ತದೆ.
8. **ಆರ್ಥಿಕ ಆವರ್ತಗಳ ಪರಿಣಾಮವು ವಿಭಿನ್ನವಾಗಿರುತ್ತದೆ**: ಒಂದು ದೇಶದಲ್ಲಿನ ವಿವಿಧ ಕೈಗಾರಿಕೆಗಳು ಮತ್ತು ವಲಯಗಳ ಮೇಲಿನ ಆರ್ಥಿಕ ಏರಿಳಿತಗಳ ಪರಿಣಾಮವು ವಿಭಿನ್ನವಾಗಿರುತ್ತದೆ. ಕೆಲವು ಕೈಗಾರಿಕೆಗಳು ಮತ್ತು ವಲಯಗಳು ಇತರೆ

ಕ್ಷೇತ್ರಗಳಿಗಿಂತ ಹೆಚ್ಚು ಸೂಕ್ಷ್ಮವಾಗಿರುತ್ತವೆ. ಉದಾಹರಣೆಗೆ ಬಂಡವಾಳ ಸರಕುಗಳ ಕೈಗಾರಿಕೆಗಳು ಇತರೆ ಕೈಗಾರಿಕೆಗಳಿಗಿಂತ ಸಾಪೇಕ್ಷವಾಗಿ ಹೆಚ್ಚು ಸೂಕ್ಷ್ಮವಾಗಿರುತ್ತವೆ.

### ಆರ್ಥಿಕ ಆವರ್ತಗಳ ಹಂತಗಳು:

ಆರ್ಥಿಕ ಆವರ್ತಗಳ ಕಾರಣಗಳನ್ನು ಅರ್ಥಮಾಡಿಕೊಳ್ಳಬೇಕಾದರೆ ಆರ್ಥಿಕ ಆವರ್ತಗಳ ವಿಭಿನ್ನ ಹಂತಗಳನ್ನು ಅಧ್ಯಯನ ಮಾಡಬೇಕಾಗುತ್ತದೆ. ಈ ಹಂತಗಳನ್ನು ವಿವಿಧ ಅರ್ಥಶಾಸ್ತ್ರಜ್ಞರು ವಿವಿಧ ಹೆಸರುಗಳಿಂದ ಕರೆಯುತ್ತಾರೆ. ಸಾಮಾನ್ಯವಾಗಿ, ಆರ್ಥಿಕ ಆವರ್ತಗಳಲ್ಲಿ ಕೆಳಕಂಡ ಹಂತಗಳನ್ನು ಗುರುತಿಸಲಾಗುತ್ತದೆ. ಅವುಗಳೆಂದರೆ:

1. ಶೃಂಗ (ವಿಸ್ತರಣೆ, ಸಮೃದ್ಧಿ ಅಥವಾ ಹಿಗ್ಗುವಿಕೆ)
2. ಹಿಂಜರಿತ (ಕುಸಿತಕ್ಕೆ ಇಳಿಯುವ ಹಂತ)
3. ಮುಗ್ಗಟ್ಟು (ಕೆಳಮುಖ ಚಲನೆ, ಸಂಕುಚನ)
4. ಚೇತರಿಕೆ (ಮೇಲ್ಮುಖ ಚಲನೆ)

**ಆರ್ಥಿಕ ಆವರ್ತಗಳ ನಾಲ್ಕು ಹಂತಗಳನ್ನು ಈ ಕೆಳಗಿನ ರೇಖಾಚಿತ್ರದಲ್ಲಿ ತೋರಿಸಲಾಗಿದೆ.**

ಚಿತ್ರ: ಆರ್ಥಿಕ ಚಕ್ರದ ವಿವಿಧ ಹಂತಗಳ ಅಲೆಗಳೋಪಾದಿಯ ಚಲನೆಯ ಬಗ್ಗೆ ಶಿಕ್ಷಕರನ್ನು ಕೇಳಿ ಅಧ್ಯೆಸಿಕೋಳ್ಳುವುದು.




ವ್ಯಾಪಾರ ಆವರ್ತದ ಅಧ್ಯಯನವನ್ನು ಉದ್ಯೋಗ ಮತ್ತು ಉತ್ಪಾದನೆಯ ಮಟ್ಟಗಳು ಕನಿಷ್ಟ ಮಟ್ಟದಲ್ಲಿದಾಗ ಅಥವಾ ಮುಗ್ಗಟ್ಟಿನ ಹಂತದಿಂದ ಪ್ರಾರಂಭಿಸೋಣ. ಆರ್ಥಿಕ ಚಟುವಟಿಕೆಗಳ ಚೇತರಿಕೆಯೊಂದಿಗೆ ಆರ್ಥಿಕ ವ್ಯವಸ್ಥೆಯು ವಿಸ್ತರಣಾ ಹಂತಕ್ಕೆ ಚಲಿಸುತ್ತದೆ. ಆದರೆ ಹಲವು ಅಂಶಗಳಿಂದಾಗಿ ಆರ್ಥಿಕತೆಯು ಶೃಂಗ ಅಥವಾ ವಿಸ್ತರಣಾ ಹಂತವನ್ನು

ತಲುಪುವುದು. ವಿಸ್ತರಣೆಯು ಅವಿರತವಾಗಿ ನಡೆಯುವುದಿಲ್ಲ. ಶೃಂಗವನ್ನು ತಲುಪಿದ ನಂತರ ಕುಗ್ಗುವಿಕೆ ಅಥವಾ ಕೆಳಮುಖ ಚಲನೆ ಪ್ರಾರಂಭವಾಗುವುದು. ಕುಗ್ಗುವಿಕೆಯ ತೀವ್ರತೆಯನ್ನು ಪಡೆದಾಗ ಆರ್ಥಿಕ ವ್ಯವಸ್ಥೆಯು ಮುಗ್ಗಟ್ಟನ್ನು ಅನುಭವಿಸುತ್ತದೆ.

## ಮುಗ್ಗಟ್ಟು:

ಹಿಂಜರಿತವು ತೀವ್ರವಾದಾಗ ಅದು ಆರ್ಥಿಕ ಮುಗ್ಗಟ್ಟಾಗಿ ಪರಿವರ್ತನೆಯಾಗುವುದು. ಈ ಹಂತದಲ್ಲಿ ಎಲ್ಲಾ ಆರ್ಥಿಕ ಚಟುವಟಿಕೆಗಳು ಸಾರ್ವತ್ರಿಕವಾಗಿ ಸಾಮಾನ್ಯಮಟ್ಟಕ್ಕಿಂತ ಕೆಳಗೆ ಇಳಿಯುತ್ತವೆ. ಆರ್ಥಿಕತೆಯ ಬೆಳವಣಿಗೆದರವು ಋಣಾತ್ಮಕವಾಗುತ್ತದೆ. ಅನುಭೋಗಿ ಮತ್ತು ಬಂಡವಾಳ ಸರಕುಗಳ ಬೆಲೆಗಳಲ್ಲಿನ ಕುಗ್ಗುವಿಕೆಯೊಂದಿಗೆ ರಾಷ್ಟ್ರೀಯ ಉತ್ಪನ್ನ ಮತ್ತು ವೆಚ್ಚದ ಮಟ್ಟಗಳು ಇಳಿಕೆಯಾಗುತ್ತವೆ. ಇದು ಪ್ರಮುಖವಾಗಿ ಉತ್ಪಾದನೆಯಲ್ಲಿನ ಇಳಿಕೆ, ನಿರುದ್ಯೋಗದ ಹೆಚ್ಚಳ, ಬೆಲೆಗಳಲ್ಲಿನ ಇಳಿಕೆ, ಲಾಭಗಳಲ್ಲಿನ ಕುಸಿತ, ಕಡಿಮೆ ಕೂಲಿ, ಸಂಕುಚನಗೊಂಡ ಸಾಲಗಳು, ಅಧಿಕ ಪ್ರಮಾಣದ ವ್ಯಾಪಾರಿ ನಷ್ಟ ಹಾಗೂ ಅಪಾರ ಹಣಕಾಸಿನ ನಷ್ಟದ ಲಕ್ಷಣಗಳನ್ನು ಹೊಂದಿದೆ. ಮುಗ್ಗಟ್ಟಿನ ಪ್ರಕ್ರಿಯೆ ಮುಂದುವರೆದಂತೆ ಎಲ್ಲಾ ಆರ್ಥಿಕ ಚಟುವಟಿಕೆಗಳು ತಳಮಟ್ಟಕ್ಕೆ ಇಳಿಯುವ ಮೂಲಕ ಮುಗ್ಗಟ್ಟಿನ ಪ್ರಕ್ರಿಯೆಯು ಪೂರ್ಣಗೊಳಿಸುತ್ತದೆ.

## ಚೇತರಿಕೆ:

ಇದು ಮುಗ್ಗಟ್ಟು ತನ್ನ ಕೆಳಹಂತವನ್ನು ತಲುಪಿದ ನಂತರ ಪ್ರಾರಂಭವಾಗುತ್ತದೆ. ಇದು ವ್ಯಾಪಾರ ಮತ್ತು ಆರ್ಥಿಕ ಚಕ್ರಗಳ ಮೇಲ್ಮುಖ ಚಲನೆಯಾಗಿದೆ. ಈ ಅವಧಿಯಲ್ಲಿ ವ್ಯವಹಾರ ಚಟುವಟಿಕೆಗಳು ನಿಧಾನವಾಗಿ ಸುಧಾರಿಸಲು ಪ್ರಾರಂಭವಾಗುತ್ತದೆ. ಹೆಚ್ಚುವರಿ ಹೂಡಿಕೆ ಮತ್ತು ಪುರ್ನನಿರ್ಮಾಣದ ಕಾರ್ಯಕ್ರಮಗಳು ಆರ್ಥಿಕ ಚಟುವಟಿಕೆಗಳನ್ನು ಉತ್ತೇಜಿಸುತ್ತವೆ. ಈ ಆರ್ಥಿಕ ಚಟುವಟಿಕೆಗಳು ಅನುಭೋಗಿ ಮತ್ತು ಬಂಡವಾಳ ಸರಕುಗಳ ವಲಯದಲ್ಲಿ ಉತ್ಪಾದನಾ ಚಟುವಟಿಕೆಗಳನ್ನು ಸೃಷ್ಟಿಸುತ್ತವೆ. ಇದರ ಪರಿಣಾಮವಾಗಿ ಕೈಗಾರಿಕೆಗಳ ಉತ್ಪಾದನೆಯು ನಿಧಾನವಾಗಿ ವಿಸ್ತರಣೆಯಾಗುತ್ತದೆ ಮತ್ತು ಹೆಚ್ಚಿನ ಉದ್ಯೋಗಾವಕಾಶಗಳು ಸೃಷ್ಟಿಯಾಗುತ್ತದೆ. ಇದು ಕೂಲಿಯ ದರ, ಲಾಭ, ಬೆಲೆಗಳ ಮಟ್ಟ ಮತ್ತು ಬ್ಯಾಂಕುಗಳ ಸಾಲ ವಿಸ್ತರಣೆಯನ್ನು ಹೆಚ್ಚಿಸುತ್ತದೆ. ಹೊಸ ಆವಿಷ್ಕಾರಗಳು, ಸರ್ಕಾರದ ವೆಚ್ಚ, ಉತ್ಪಾದನಾ ತಂತ್ರಗಳಲ್ಲಿನ ಬದಲಾವಣೆ, ಹೊಸ ಕ್ಷೇತ್ರಗಳಲ್ಲಿ ಹೆಚ್ಚುವರಿ ಹೂಡಿಕೆ, ಹೊಸ ಇಂಧನ ಮೂಲಗಳ ಶೋಧನೆ ಇತ್ಯಾದಿಗಳಿಂದಲೂ ಚೇತರಿಕೆಯ ವೇಗವು ಹೆಚ್ಚುತ್ತದೆ. ಆರ್ಥಿಕತೆಯಲ್ಲಿನ ಚೇತರಿಕೆಯು ವಿಸ್ತರಣೆ ಮತ್ತು ಸಮೃದ್ಧಿಯ ಹಂತಗಳಿಗೆ ದಾರಿ ಮಾಡಿಕೊಡುತ್ತದೆ.

## ಶೃಂಗ:

ಶೃಂಗ ಅಥವಾ ಸಮೃದ್ಧಿಯ ಹಂತದ ಪ್ರಮುಖ ಲಕ್ಷಣವೆಂದರೆ ಪೂರ್ಣೋದ್ಯೋಗ ಆಗಿದೆ. ಇದು ರಾಷ್ಟ್ರೀಯ ಆದಾಯದಲ್ಲಿನ ಹೆಚ್ಚಳ, ಅನುಭೋಗ ವೆಚ್ಚ, ಬಂಡವಾಳ ಹೂಡಿಕೆ, ಬ್ಯಾಂಕುಗಳ ಸಾಲ ವಿಸ್ತರಣೆ, ಲಾಭಗಳು, ಕಚ್ಚಾವಸ್ತುಗಳ ಬೆಲೆಗಳು, ಬಂಡವಾಳ ಸರಕುಗಳ ಬೆಲೆಯ ಹೆಚ್ಚಳ ಮತ್ತು ಪೂರ್ಣೋದ್ಯೋಗದ ಲಕ್ಷಣಗಳನ್ನು ಒಳಗೊಂಡಿದೆ. ಒಟ್ಟಾರೆ ಆರ್ಥಿಕತೆಯಲ್ಲಿ ಆಶಾದಾಯಕ ಸ್ಥಿತಿಯಿರುತ್ತದೆ.

ವ್ಯವಹಾರ ಚಟುವಟಿಕೆಗಳಲ್ಲಿನ ವೇಗದ ವಿಸ್ತರಣೆಯು ಅತ್ಯಧಿಕ ಲಾಭ ಮತ್ತು ಕೂಲಿಗಳು, ಅಧಿಕ ಪೇರು, ಅತ್ಯಧಿಕ ಬಂಡವಾಳ ಸಂಚಯನ ಮತ್ತು ಸರಕುಗಳ ಬೆಲೆಗಳು ಮತ್ತು ಪೂರ್ಣೋದ್ಯೋಗದ ಕಡೆಗೆ ಚಲಿಸುತ್ತದೆ. ಇದು ಶೃಂಗ ಅಥವಾ ಸಮೃದ್ಧಿಯ ಹಂತವಾಗಿದೆ. ಎಲ್ಲಾ ಕಡೆಯೂ ಆಶಾದಾಯಕ ವಾತಾವರಣ ಉಂಟಾಗುತ್ತದೆ. ಯಂತ್ರೋಪಕರಣಗಳು ಮತ್ತು ಇತರೆ ಮೂಲಭೂತ ಸೌಕರ್ಯಗಳ ಮಿತಿಮೀರಿದ ಬಳಕೆಯ ತರುವಾಯ ಆರ್ಥಿಕತೆಯ ಮೇಲೆ ಋಣಾತ್ಮಕ ಪರಿಣಾಮ ಆರಂಭವಾಗುತ್ತದೆ. ಹಣದುಬ್ಬರದಲ್ಲಿ ಬೆಲೆ ಏರಿಕೆಯ ಜೊತೆಗೆ, ಮಾರಾಟವಾಗದ ದಾಸ್ತಾನುಗಳು, ವ್ಯಾಪಾರ ನಿರೀಕ್ಷೆಗಳ ಇಳಿಕೆ, ಹೂಡಿಕೆ ಮತ್ತು ಉದ್ಯೋಗದ ಅಂಶಗಳಲ್ಲಿನ ನಿಧಾನಗತಿ ಇಳಿಕೆಗಳು ವ್ಯಾಪಾರದ ನಿರೀಕ್ಷೆಗಳನ್ನು ಹುಸಿಗೊಳಿಸುತ್ತವೆ. ಇದು ಮುಂದಿನ ಹಂತಕ್ಕೆ ಪ್ರಾರಂಭವನ್ನು ನೀಡಿ ವ್ಯಾಪಾರ ಅಥವಾ ಆರ್ಥಿಕ ಚಕ್ರಗಳ ಕೆಳಮುಖ ಚಲನೆಗೆ ಕಾರಣವಾಗುತ್ತದೆ.

## ಹಿಂಜರಿತ:

ಸಮೃದ್ಧಿಯಿಂದ ವ್ಯವಹಾರ ಚಟುವಟಿಕೆಗಳ ಕುಸಿತಕ್ಕೆ ಇಳಿಯುವ ಹಂತವನ್ನು ಹಿಂಜರಿತ ಎಂದು ಕರೆಯಲಾಗುತ್ತದೆ. ವ್ಯವಹಾರ ಚಟುವಟಿಕೆಗಳಲ್ಲಿನ ವಿಫಲತೆಯಲ್ಲಿನ ಪ್ರಾರಂಭವು ಉದ್ಯಮಗಳಲ್ಲಿ ಹೆಚ್ಚು ಭೀತಿಯನ್ನು ಸೃಷ್ಟಿಸುತ್ತದೆ. ಬ್ಯಾಂಕುಗಳು ವ್ಯಾಪಾರಿ ಉದ್ಯಮಗಳಿಂದ ಸಾಲವನ್ನು ಹಿಂತಿರುಗಿ ಪಡೆಯಲು ಆರಂಭಿಸುತ್ತವೆ. ಬೆಲೆಗಳ ಕುಸಿತ ಮತ್ತು ವ್ಯಾಪಾರಸ್ಥರ ನಂಬಿಕೆ ಅಲುಗಾಡುತ್ತದೆ, ಆರ್ಥಿಕ ಚಟುವಟಿಕೆಗಳು ನಿಧಾನವಾಗಿ ಇಳಿಯತೊಡಗುತ್ತವೆ ಮತ್ತು ಕೈಗಾರಿಕೆಗಳಿಂದ ಉದ್ಯೋಗಿಗಳನ್ನು ಕೈಬಿಡಲಾಗುತ್ತದೆ ನಿರುದ್ಯೋಗವು ಆದಾಯ, ವೆಚ್ಚ, ಬೆಲೆಗಳು ಮತ್ತು ಲಾಭಗಳಲ್ಲಿನ ಇಳಿಕೆಗೆ ಕಾರಣವಾಗುತ್ತದೆ. ಈ ಪ್ರಕ್ರಿಯೆಯು ವಿಸ್ತರಣಾ ಪ್ರಕ್ರಿಯೆಯ ವಿರುದ್ಧ ಸನ್ನಿವೇಶವಾಗಿದೆ. ಈ ಹಂತದಲ್ಲಿ ಹಿಂಜರಿತದ ಪ್ರಕ್ರಿಯೆಯು ಕೊನೆಗೊಳ್ಳುವುದು.

## ಆರ್ಥಿಕ ಆವರ್ತಗಳ ವಿಧಗಳು:

ವಿವಿಧ ಅರ್ಥಶಾಸ್ತ್ರಜ್ಞರು ವಿವಿಧ ಬಗೆಯ ಆರ್ಥಿಕ ಆವರ್ತಗಳನ್ನು ಸೂಚಿಸಿದ್ದಾರೆ. ಪ್ರೊ.ಜೇಮ್ಸ್ ಅರ್ಥರ್ ಎಸ್ಟೆ ಎಂಬುವರು ಆರ್ಥಿಕ ಆವರ್ತಗಳನ್ನು ನಾಲ್ಕು ವಿಧಗಳಾಗಿ ವಿಂಗಡಿಸಿದ್ದಾರೆ. ಅವುಗಳೆಂದರೆ:

1. ಬೃಹತ್ ಆರ್ಥಿಕ ಆವರ್ತಗಳು

2. ಸಣ್ಣ ಆರ್ಥಿಕ ಆವರ್ತಗಳು
3. ಕಟ್ಟಡ ಆವರ್ತಗಳು ಮತ್ತ
4. ಕೊಂಡ್ರಾಟಿಫ್ ಆವರ್ತಗಳು

**ಬೃಹತ್ ಆರ್ಥಿಕ ಆವರ್ತಗಳು:**

ಸತತ ಬಿಕ್ಕಟ್ಟಿನ ನಡುವೆ ಉಂಟಾಗುವ ಆರ್ಥಿಕ ಚಟುವಟಿಕೆಗಳಲ್ಲಿನ ಏರಿಳಿತಗಳನ್ನು ಬೃಹತ್ ಆವರ್ತಗಳೆಂದು ಕರೆಯಲಾಗುತ್ತದೆ. ಇದು ಆರ್ಥಿಕ ಚಟುವಟಿಕೆಗಳ ಸತತ ಕೆಳಮಟ್ಟದ ತಿರುವುಗಳು ಅಥವಾ ಪ್ರಮುಖ ಹಿಂಜರಿತಗಳನ್ನು ಒಳಗೊಂಡಿದೆ. ಈ ಬೃಹತ್ ಆವರ್ತಗಳನ್ನು ಜಗ್ಲರ್ ಆವರ್ತಗಳೆಂದೂ ಕರೆಯುತ್ತಾರೆ. ಫ್ರೆಂಚ್ ಅರ್ಥಶಾಸ್ತ್ರಜ್ಞನಾದ ಕ್ಲೇಮೆಂಟ್ ಜಗ್ಲರ್‌ರವರು ಆರ್ಥಿಕ ಚಟುವಟಿಕೆಗಳಲ್ಲಿನ ಆವರ್ತ ಸ್ವರೂಪದ ಏರಿಳಿತಗಳ ತನಿಖೆಯ ಆಧಾರದ ಮೇಲೆ ಇದನ್ನು ವಿವರಿಸಿದ್ದಾರೆ. ಈ ಬಗೆಯ ಬೃಹತ್ ಆರ್ಥಿಕ ಆವರ್ತಗಳ ಸರಾಸರಿ ಅವಧಿಯು 10 ವರ್ಷಗಳಾಗಿವೆ.

**ಸಣ್ಣ ಆರ್ಥಿಕ ಆವರ್ತಗಳು:**

ಬೃಹತ್ ಆವರ್ತಗಳಲ್ಲಿ ಕಂಡು ಬರುವ ಲಘು ವ್ಯಾಪಾರ ಆವರ್ತಗಳನ್ನು ಸಣ್ಣ ಆವರ್ತಗಳೆಂದು ಕರೆಯಲಾಗುತ್ತದೆ. ಪ್ರತಿ ಬೃಹತ್ ಆವರ್ತಗಳು ಎರಡು ಅಥವಾ ಮೂರು ಸಣ್ಣ ಆವರ್ತಗಳಿಂದ ರಚಿಸಲ್ಪಟ್ಟಿರುತ್ತದೆ. ಸಣ್ಣ ಆವರ್ತಗಳನ್ನು ಕಿಚನ್ ಆವರ್ತಗಳೆಂತಲೂ ಕರೆಯಲಾಗುತ್ತದೆ. ಜೋಸೆಫ್ ಕಿಚನ್‌ರವರು ಈ ಬಗೆಯ ಆರ್ಥಿಕ ಆವರ್ತಗಳ ಏರಿಳಿತಗಳ ಕುರಿತು ಚರ್ಚಿಸಿದ್ದಾರೆ. ಸಣ್ಣ ಆವರ್ತಗಳ ಸರಾಸರಿ ಅವಧಿಯು 40 ತಿಂಗಳುಗಳಾಗಿವೆ.

**ಕಟ್ಟಡ ಆವರ್ತಗಳು:**

ಈ ಬಗೆಯ ಆರ್ಥಿಕ ಆವರ್ತಗಳು ಪ್ರಮುಖವಾಗಿ ಕಟ್ಟಡ ಅಥವಾ ಕೈಗಾರಿಕೆಗಳ ನಿರ್ಮಾಣಕ್ಕೆ ಸಂಬಂಧಿಸಿದೆ. ಇದು ನಿರ್ಮಾಣ ಚಟುವಟಿಕೆಗಳಲ್ಲಿನ ಮೇಲ್ಮುಖ ಮತ್ತು ಕೆಳಮುಖ ಹಂತಗಳನ್ನು ಸೂಚಿಸುತ್ತದೆ. ಈ ಬಗೆಯ ಆರ್ಥಿಕ ಆವರ್ತಗಳ ಅವಧಿಯು 15 ರಿಂದ 20 ವರ್ಷಗಳ ನಡುವೆ ಇರುತ್ತದೆ. ಇದು ಇತರೆ ಆರ್ಥಿಕ ಆವರ್ತಗಳಿಗಿಂತ ಧೀರ್ಘಾವಧಿಯದಾಗಿರುತ್ತದೆ.

**ಕೊಂಡ್ರಾಟಿಫ್ ಆರ್ಥಿಕ ಆವರ್ತಗಳು**

ಕೊಂಡ್ರಾಟಿಫ್ ಆರ್ಥಿಕ ಆವರ್ತಗಳನ್ನು ದೀರ್ಘಾವಧಿ ಅಲೆಗಳೆಂತಲೂ ಕರೆಯಲಾಗುತ್ತದೆ. ಈ ಬಗೆಯ ಆವರ್ತಗಳು 50 ರಿಂದ 60 ವರ್ಷಗಳ ಅವಧಿಗೆ ಸಂಭವಿಸುತ್ತವೆ. ಕೊಂಡ್ರಾಟಿಫ್‌ರವರು 1925 ರಲ್ಲಿ ಈ ಬಗೆಯ ಆರ್ಥಿಕ ಏರಿಳಿತಗಳನ್ನು ತಿಳಿಸಿದ್ದರು.

## ಅಭ್ಯಾಸ

**I. ಈ ಕೆಳಗಿನ ಪ್ರಶ್ನೆಗಳಿಗೆ ನಾಲ್ಕು ಪರ್ಯಾಯ ಉತ್ತರಗಳನ್ನು ಕೊಡಲಾಗಿದೆ ಅವುಗಳಲ್ಲಿ ಸೂಕ್ತವಾದ ಉತ್ತರವನ್ನು ಆರಿಸಿ ಬರೆಯಿರಿ.**

1) ಪ್ರೊ. ಜೇಮ್ಸ್ ಅರ್ಥರ್ ಎಸ್ಟೆ ಎಂಬುವರು ಆರ್ಥಿಕ ಆವರ್ತಗಳನ್ನು _______ ವಿಧಗಳಾಗಿ ವಿಂಗಡಿಸಿದ್ದಾರೆ.

ಅ) ಎರಡು
ಆ) ಮೂರು
ಇ) ನಾಲ್ಕು
ಈ) ಐದು

2) ಚೇತರಿಕೆಯು _______ ಗಳಿಂದ ಪ್ರಾರಂಭವಾಗುತ್ತದೆ

ಅ) ಹೊಸ ಆವಿಷ್ಕಾರ
ಆ) ಸರ್ಕಾರದ ವೆಚ್ಚ
ಇ) ಉತ್ಪಾದನಾ ತಂತ್ರದಲ್ಲಿನ ಬದಲಾವಣೆ
ಈ) ಮೇಲಿನ ಎಲ್ಲವೂ

3) ಆರ್ಥಿಕ ಆವರ್ತಗಳ ಲಕ್ಷಣಗಳೆಂದರೆ _______

ಅ) ನಿಯಮಿತವಾದುದು
ಆ) ಪುನರಾವರ್ತನೆಯ ಸ್ವರೂಪ
ಇ) ಸಂಗ್ರಹಕಾರಕ ಮತ್ತು ಸ್ವಯಂ ಬಲಪಡಿಸಿಕೊಳ್ಳುವಿಕೆ
ಈ) ಮೇಲಿನ ಎಲ್ಲವೂ

4) ಕೊಂಡ್ರಾಟಿಫ್ ಆರ್ಥಿಕ ಆವರ್ತಗಳ ಅವಧಿಯು _______

ಅ) 5 ರಿಂದ 10 ವರ್ಷಗಳು
ಆ) 15 ರಿಂದ 20 ವರ್ಷಗಳು
ಇ) 30 ರಿಂದ 40 ವರ್ಷಗಳು
ಈ) 50 ರಿಂದ 60 ವರ್ಷಗಳು

5) ಆರ್ಥಿಕ ಆವರ್ತಗಳನ್ನು _______ ಎಂದು ಕರೆಯುವರು.

ಅ) ವ್ಯಾಪಾರ ಆವರ್ತ
ಆ) ಆರ್ಥಿಕ ಆವರ್ತ
ಇ) ಅ ಮತ್ತು ಆ ಎರಡೂ
ಈ) ಮೇಲಿನ ಯಾವುದೂ ಅಲ್ಲ

**II. ಈ ಕೆಳಗಿನ ವಾಕ್ಯಗಳಲ್ಲಿ ಖಾಲಿ ಬಿಟ್ಟ ಸ್ಥಳಗಳನ್ನು ತುಂಬಿರಿ.**

1. ಆರ್ಥಿಕ ಆವರ್ತಗಳೆಂದರೆ ಆರ್ಥಿಕ ಚಟುವಟಿಕೆಗಳ ಮಟ್ಟದಲ್ಲಿನ _______ ಪುನರಾವರ್ತನೆ ಆಗಿವೆ.
2. ಸಮೃದ್ಧಿಯ ಹಂತದ ಪ್ರಮುಖ ಲಕ್ಷಣವೆಂದರೆ _______
3. ಸಮೃದ್ಧಿಯಿಂದ ವ್ಯವಹಾರ ಚಟುವಟಿಕೆಗಳ ಕುಸಿತಕ್ಕೆ ಇಳಿಯುವ ಹಂತವನ್ನು _______ ಎಂದು ಕರೆಯಲಾಗುತ್ತದೆ.
4. ವ್ಯವಹಾರ ಚಟುವಟಿಕೆಗಳಲ್ಲಿನ ವೇಗದ ವಿಸ್ತರಣೆಯನ್ನು _______ ಹಂತವು ಸೂಚಿಸುತ್ತದೆ.
5. ಬ್ರಿಟಿಷ್ ಅರ್ಥಶಾಸ್ತ್ರಜ್ಞರು ಆರ್ಥಿಕ ಆವರ್ತಗಳನ್ನು _______ ಎಂದು ಕರೆದರು.

**III. ಈ ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

1. ಆರ್ಥಿಕ ಆವರ್ತವನ್ನು ವ್ಯಾಖ್ಯಾನಿಸಿ.
2. ಕೊಂಡ್ರಾಟಿಫ್ ಆರ್ಥಿಕ ಆವರ್ತಗಳು ಎಂದರೇನು?
3. ಸಮೃದ್ಧಿ ಎಂದರೇನು?
4. ಹಿಂಜರಿತ ಎಂದರೇನು?
5. ಬೃಹತ್ ಆವರ್ತಗಳ ಮತ್ತೊಂದು ಹೆಸರೇನು?

**IV. ಈ ಕೆಳಗಿನ ಪ್ರಶ್ನೆಗಳಿಗೆ ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿ.**

1. ಆರ್ಥಿಕ ಆವರ್ತದ ಅರ್ಥ ಮತ್ತು ವ್ಯಾಖ್ಯೆಯನ್ನು ಬರೆಯಿರಿ.
2. ಆರ್ಥಿಕ ಆವರ್ತದ ವಿವಿಧ ವಿಧಗಳಾವುವು?
3. ಆರ್ಥಿಕ ಆವರ್ತದ ವಿವಿಧ ಹಂತಗಳಾವುವು?
4. ಆರ್ಥಿಕ ಆವರ್ತದ ಯಾವುದಾದರೂ ನಾಲ್ಕು ಲಕ್ಷಣಗಳನ್ನು ಬರೆಯಿರಿ.
5. ಬೃಹತ್ ಆವರ್ತಗಳು ಮತ್ತು ಸಣ್ಣ ಆವರ್ತಗಳ ನಡುವಿನ ವ್ಯತ್ಯಾಸ ತಿಳಿಸಿ.

**V. ಈ ಕೆಳಗಿನ ಪ್ರಶ್ನೆಗಳಿಗೆ ಎಂಟು ವಾಕ್ಯಗಳಲ್ಲಿ ಉತ್ತರಿಸಿ.**

1. ಆರ್ಥಿಕ ಆವರ್ತದ ವಿಧಗಳನ್ನು ವಿವರಿಸಿ.

2. ಆರ್ಥಿಕ ಆವರ್ತಗಳ ಲಕ್ಷಣಗಳನ್ನು ಚರ್ಚಿಸಿ.
3. ಆರ್ಥಿಕ ಆವರ್ತಗಳ ವಿವಿಧ ಹಂತಗಳನ್ನು ವಿವರಿಸಿ.
4. ಆರ್ಥಿಕ ಆವರ್ತದ ಚೇತರಿಕೆ ಮತ್ತು ಶೃಂಗದ ಹಂತಗಳ ಬಗ್ಗೆ ಕಿರು ಟಿಪ್ಪಣಿ ಬರೆಯಿರಿ.
5. ಆರ್ಥಿಕ ಆವರ್ತಗಳ ಮುಗ್ಗಟ್ಟು ಮತ್ತು ಹಿಂಜರಿತ ಹಂತಗಳ ನಡುವಿನ ವ್ಯತ್ಯಾಸವನ್ನು ತಿಳಿಸಿ.

**ನಿಯೋಜಿತ ಕಾರ್ಯ:**

20 ಮತ್ತು 21 ನೇ ಶತಮಾನದಲ್ಲಿ ಜಾಗತಿಕ ಹಿಂಜರಿತ ಮತ್ತು ಮುಗ್ಗಟ್ಟಿನ ಪ್ರಭಾವಕ್ಕೆ ಒಳಗಾದ ಅವಧಿಗಳನ್ನು ಪಟ್ಟಿ ಮಾಡಿರಿ.

2008 ರ ಹಣಕಾಸಿನ ಹಿಂಜರಿತದ ಪರಿಣಾಮಗಳ ಬಗ್ಗೆ ಮಾಹಿತಿಯನ್ನು ಸಂಗ್ರಹಿಸಿ.

## ಅಧ್ಯಾಯ- 8: ಹಣದುಬ್ಬರ ಮತ್ತು ಹಣದ ಅನಪ್ರಸರಣ

'ಹಣದುಬ್ಬರವು ಸದಾ ಮತ್ತು ಸರ್ವವ್ಯಾಪಿ ಹಣಕಾಸಿನ ವಿದ್ಯಮಾನವಾಗಿದ್ದು, ಇದನ್ನು ಉತ್ಪನಗಳ ಉತ್ಪಾದನೆಗಿಂತ ತೀವ್ರ ಮಟ್ಟದ ಪೂರೈಕೆಯ ಹೆಚ್ಚಳದಿಂದ ಉತ್ಪಾದಿಸಬಹುದು'. ಮಿಲ್ಟನ್ ಫ್ರೀಡ್‌ಮನ್

### ಪೀಠಿಕೆ:

ನಾವು ನಮ್ಮ ದಿನನಿತ್ಯದ ಜೀವನದಲ್ಲಿ ಬಳಸುವ ಸರಕು ಮತ್ತು ಸೇವೆಗಳನ್ನು ಮಾರುಕಟ್ಟೆಯಲ್ಲಿ ಖರೀದಿಸುತ್ತೇವೆ. ಇವುಗಳು ಆರ್ಥಿಕ ಸರಕುಗಳಾಗಿದ್ದು, ನಿರ್ದಿಷ್ಟ ಬೆಲೆಗೆ ಮಾತ್ರ ಲಭ್ಯವಿರುತ್ತದೆ. ನಾವು ನಮ್ಮ ಜೀವನದ ಗುಣಮಟ್ಟವನ್ನು ಕಾಪಾಡಿಕೊಳ್ಳುವ ದೃಷ್ಟಿಯಲ್ಲಿರಿಸಿಕೊಂಡು ಸಾಕಷ್ಟು ಸರಕು ಮತ್ತು ಸೇವೆಗಳನ್ನು ಕೊಳ್ಳಲು ಸಾಧ್ಯವಾಗುವ ಹಾಗೆ ಬೆಲೆಗಳು ಸ್ವೀಕಾರಾರ್ಹ ವ್ಯಾಪ್ತಿಯಲ್ಲಿ ಇರಬೇಕೆಂದು ನಿರೀಕ್ಷಿಸುತ್ತೇವೆ. ಆದರೆ ಬೆಲೆಗಳು ಸಾಮಾನ್ಯವಾಗಿ, ಅದರಲ್ಲೂ ಆರ್ಥಿಕ ಆವರ್ತಗಳ ವಿಸ್ತರಣಾ ಹಂತದಲ್ಲಿ ಏರಿಕೆಯ ಪ್ರವೃತ್ತಿಯನ್ನು ಹೊಂದಿರುತ್ತವೆ. ಮತ್ತೊಂದೆಡೆ ನಮ್ಮ ಆದಾಯಗಳು ಬೆಲೆಗಳು ಹೆಚ್ಚಳವಾದ ದರಗಳಲ್ಲಿ ಹೆಚ್ಚಳವಾಗದಿರಬಹುದು. ಹಾಗಾದರೆ ಹಣದುಬ್ಬರ ಎಂದರೇನು? ಹಣದುಬ್ಬರದ ವಿವಿಧ ವಿಧಗಳಾವುವು? ಹಣದುಬ್ಬರದ ಕಾರಣಗಳಾವುವು ಮತ್ತು ಆರ್ಥಿಕತೆಯ ಮೇಲೆ ಹಣದುಬ್ಬರದ ಪರಿಣಾಮಗಳೇನು? ಹಣದ ಅನಪ್ರಸರಣ ಎಂದರೇನು? ಮತ್ತು ಆರ್ಥಿಕತೆಯ ಮೇಲೆ ಹಣದ ಅನಪ್ರಸರಣದ ಪರಿಣಾಮಗಳೇನು? ಈ ಎಲ್ಲಾ ಪ್ರಶ್ನೆಗಳಿಗೆ ಉತ್ತರವನ್ನು ತಿಳಿಯುವುದು ಹಾಗೂ ಹಣದುಬ್ಬರ ಮತ್ತು ಹಣದ ಅನಪ್ರಸರಣದ

ಆರ್ಥಿಕತೆಯ ಮೇಲೆ ಬೀರುವ ಪರಿಣಾಮಗಳ ಬಗ್ಗೆ ಹೆಚ್ಚಿನ ಮಾಹಿತಿಯನ್ನು ತಿಳಿಸುವ ಉದ್ದೇಶವನ್ನು ಈ ಅಧ್ಯಾಯವು ಹೊಂದಿದೆ.

## ಹಣದುಬ್ಬರದ ಅರ್ಥ ಮತ್ತು ವ್ಯಾಖ್ಯಾನ:

ಹಣದುಬ್ಬರವೆಂದರೆ ಸಾರ್ವತ್ರಿಕ ಬೆಲೆಗಳ ಮಟ್ಟದಲ್ಲಿನ ನಿರಂತರ ಏರಿಕೆಯಾಗಿದೆ.

ಕ್ರೌಥರ್‌ರವರ ಪ್ರಕಾರ: ಹಣದುಬ್ಬರವೆಂದರೆ 'ಹಣದ ಮೌಲ್ಯವು ಇಳಿಯುತ್ತಿರುವ ಸ್ಥಿತಿ, ಅಂದರೆ ಬೆಲೆಗಳು ಹೆಚ್ಚುತ್ತಿರುವ ಸ್ಥಿತಿ' ಎಂದು ವ್ಯಾಖ್ಯಾನಿಸಿದ್ದಾರೆ.

ಪ್ರೊ. ಕೋಲಬರ್ನ್ ರವರ ಹಣದುಬ್ಬರವೆಂದರೆ: "ಅತ್ಯಂತ ಹೆಚ್ಚಿನ ಪ್ರಮಾಣದ ಹಣವು ಅತ್ಯಂತ ಕಡಿಮೆ ಸರಕುಗಳನ್ನು ಬೆನ್ನಟ್ಟುವ ವಿದ್ಯಮಾನವಾಗಿದೆ".

ಪ್ರೊ. ಹಾಟ್ರೆ ರವರ ಹಣದುಬ್ಬರವೆಂದರೆ: 'ಅತ್ಯಂತ ಹೆಚ್ಚಿನ ಪ್ರಮಾಣದ ಹಣದ ಚಲಾವಣೆ' ಎಂದು ವ್ಯಾಖ್ಯಾನಿಸಿದ್ದಾರೆ.

ಸಾಮಾನ್ಯವಾಗಿ, ಸರಕುಗಳ ಬೆಲೆಗಳಲ್ಲಿನ ಏರಿಕೆಯ ಕಾರಣದಿಂದ ಹಣದ ಮೌಲ್ಯ ಇಳಿಯುತ್ತಿರುವ ಪರಿಸ್ಥಿತಿಯೇ ಹಣದುಬ್ಬರವಾಗಿದೆ.

## ಹಣದುಬ್ಬರದ ವಿಧಗಳು:

ಹಣದುಬ್ಬರವನ್ನು ಬೆಲೆ ಏರಿಕೆಯ ವೇಗ, ಸಮಯ ಮತ್ತು ಇತರೆ ಅಂಶಗಳ ಆಧಾರದ ಮೇಲೆ ವಿಂಗಡಿಸಲಾಗಿದೆ. ಅವುಗಳನ್ನು ಸಂಕ್ಷಿಪ್ತವಾಗಿ ಚರ್ಚಿಸೋಣ.

**1. ಬೆಲೆ ಏರಿಕೆಯ ವೇಗದ ಆಧಾರದಲ್ಲಿ ಹಣದುಬ್ಬರದ ವಿಧಗಳು:** ಬೆಲೆ ಏರಿಕೆಯ ವೇಗದ ಆಧಾರಿತ ಹಣದುಬ್ಬರದ ವರ್ಗೀಕರಣವೆಂದರೆ:

i. ತೆವಳುವ ಹಣದುಬ್ಬರ
ii. ನಡೆಯುತ್ತಿರುವ ಹಣದುಬ್ಬರ
iii. ಓಡುತ್ತಿರುವ ಹಣದುಬ್ಬರ
iv. ನಾಗಾಲೋಟದ ಹಣದುಬ್ಬರ

**i) ತೆವಳುವ ಹಣದುಬ್ಬರ:**

ಸರಕು ಮತ್ತು ಸೇವೆಗಳ ಬೆಲೆಗಳು ಅತಿ ನಿಧಾನ ಗತಿಯಲ್ಲಿ ಅಥವಾ ಬಹಳ ಕಡಿಮೆ ದರದಲ್ಲಿ ಏರುತ್ತಿದ್ದರೆ ಅದಕ್ಕೆ ತೆವಳುವ ಹಣದುಬ್ಬರ ಎಂದು ಕರೆಯಲಾಗುತ್ತದೆ. ಹಣದುಬ್ಬರದ ವಾರ್ಷಿಕ ದರ ಸುಮಾರು ಶೇ.3ರಷ್ಟಿರುತ್ತದೆ. ಈ ಬಗೆಯ ಹಣದುಬ್ಬರವು ವಿವಿಧ ವಲಯಗಳನ್ನು ಉತ್ತೇಜಿಸುತ್ತದೆ ಮತ್ತು ಒಟ್ಟಾರೆ ಆರ್ಥಿಕ ವ್ಯವಸ್ಥೆಯ ಅಭಿವೃದ್ಧಿಗೆ ಕಾರಣವಾಗುತ್ತದೆ.

**ii) ನಡೆಯುತ್ತಿರುವ ಹಣದುಬ್ಬರ:**

ಒಂದು ವೇಳೆ ತೆವಳುವ ಹಣದುಬ್ಬರವು ದೀರ್ಘಕಾಲದವರೆಗೆ ಮುಂದುವರೆದರೆ ಇದು ನಡೆಯುತ್ತಿರುವ ಹಣದುಬ್ಬರವಾಗಿ ಪರಿವರ್ತನೆಗೊಳ್ಳುತ್ತದೆ. ಈ ಬಗೆಯ ಹಣದುಬ್ಬರದಲ್ಲಿ ಬೆಲೆಗಳು ವಾರ್ಷಿಕವಾಗಿ ಸುಮಾರು ಶೇ. 5 ರ ಮಧ್ಯಮ ದರದಲ್ಲಿ ಹೆಚ್ಚಳವಾಗುತ್ತದೆ. ಇದು ಸಹ ಆರ್ಥಿಕ ವ್ಯವಸ್ಥೆಯಲ್ಲಿ ಹೂಡಿಕೆ ಮತ್ತು ಉತ್ಪಾದಕ ಚಟುವಟಿಕೆಗಳನ್ನು ಉತ್ತೇಜಿಸುತ್ತದೆ.

**iii) ಓಡುತ್ತಿರುವ ಹಣದುಬ್ಬರ:**

ಒಂದು ವೇಳೆ ಬೆಲೆಗಳು ವಾರ್ಷಿಕವಾಗಿ ಶೇ.10 ರಿಂದ 20 ರ ದರದಲ್ಲಿ ಏರಿಕೆಯಾಗುತ್ತಿದ್ದರೆ ಅದನ್ನು ಓಡುತ್ತಿರುವ ಹಣದುಬ್ಬರ ಎಂದು ಕರೆಯಲಾಗುತ್ತದೆ. ಇದು ಎರಡು ಅಂಕೆಯ ದರದ ಹಣದುಬ್ಬರವಾಗಿದೆ. ಒಂದು ವೇಳೆ ಓಡುತ್ತಿರುವ ಹಣದುಬ್ಬರವನ್ನು ನಿಯಂತ್ರಿಸದಿದ್ದರೆ ಇದು ಆರ್ಥಿಕ ವ್ಯವಸ್ಥೆಯಲ್ಲಿ ಉಳಿತಾಯವನ್ನು ಕಡಿಮೆಗೊಳಿಸುವ ಮೂಲಕ ಅಂತಿಮವಾಗಿ ಆರ್ಥಿಕತೆಯ ಕೆಳಮಟ್ಟದ ಬೆಳವಣಿಗೆಗೆ ಕಾರಣವಾಗುತ್ತದೆ.

**iv) ನಾಗಾಲೋಟದ ಹಣದುಬ್ಬರ:**

ಒಂದು ವೇಳೆ ಬೆಲೆಗಳು ವಾರ್ಷಿಕವಾಗಿ ಶೇ. 20 ಕ್ಕಿಂತ ಹೆಚ್ಚಿನ ದರದಲ್ಲಿ ಏರಿಕೆಯಾಗುತ್ತಿದ್ದರೆ, ಅದನ್ನು ನಾಗಲೋಟದ ಹಣದುಬ್ಬರ ಎಂದು ಕರೆಯಲಾಗುತ್ತದೆ. ಇದರಿಂದಾಗಿ ಜನರಿಗೆ ಮತ್ತು ಆರ್ಥಿಕ ವ್ಯವಸ್ಥೆಗೆ ಬಹಳಷ್ಟು ತೊಂದರೆಗಳು ಉಂಟಾಗುತ್ತವೆ. ನಾಗಾಲೋಟದ ಹಣದುಬ್ಬರವು ಆರ್ಥಿಕ ವ್ಯವಸ್ಥೆಗೆ ಬಹಳ ಅಪಾಯಕಾರಿಯಾದುದ್ದಾಗಿದೆ.

**2. ಕಾಲದ ಆಧಾರದ ಮೇಲೆ ಹಣದುಬ್ಬರದ ವಿಧಗಳು:** ಕಾಲದ ಆಧಾರದ ಮೇಲೆ ವರ್ಗೀಕರಿಸುವ ಹಣದುಬ್ಬರದ ವಿಧಗಳೆಂದರೆ: 1) ಶಾಂತಿ ಕಾಲದ ಹಣದುಬ್ಬರ, 2) ಯುದ್ಧ ಕಾಲದ ಹಣದುಬ್ಬರ, 3) ಯುದ್ಧ ನಂತರದ ಹಣದುಬ್ಬರ

**i) ಶಾಂತಿ ಕಾಲದ ಹಣದುಬ್ಬರ:** ಸಾಮಾನ್ಯ ಅಥವಾ ಶಾಂತಿಕಾಲದ ಅವಧಿಯಲ್ಲಿ ಸಾಮಾನ್ಯ ಬೆಲೆಗಳ ಮಟ್ಟಗಳಲ್ಲಿ ಏರಿಕೆಯಾದರೆ ಅದನ್ನು ಶಾಂತಿ ಕಾಲದ ಹಣದುಬ್ಬರ ಎಂದು ಕರೆಯಲಾಗುತ್ತದೆ. ಈ ಬಗೆಯ ಹಣದುಬ್ಬರವು ಆರ್ಥಿಕ ವ್ಯವಸ್ಥೆಯಲ್ಲಿ ಅಭಿವೃದ್ಧಿಯ ಯೋಜನೆಗಳ ಮೇಲಿನ ಸರ್ಕಾರದ ವೆಚ್ಚಗಳು ಹೆಚ್ಚಾಗುವ ಕಾರಣದಿಂದ ಸಂಭವಿಸುತ್ತದೆ.

ii) **ಯುದ್ಧ ಕಾಲದ ಹಣದುಬ್ಬರ:** ಯುದ್ಧ ಕಾಲಾವಧಿಯಲ್ಲಿ ಸಾಮಾನ್ಯ ಬೆಲೆಗಳ ಮಟ್ಟದಲ್ಲಿ ಏರಿಕೆಯಾದರೆ ಅದನ್ನು ಯುದ್ಧ ಕಾಲದ ಹಣದುಬ್ಬರ ಎಂದು ಕರೆಯಲಾಗುತ್ತದೆ.

iii) **ಯುದ್ಧ ನಂತರದ ಹಣದುಬ್ಬರ:** ಯುದ್ಧದ ನಂತರದಲ್ಲಿ ತಕ್ಷಣ ಸಾಮಾನ್ಯ ಬೆಲೆಗಳ ಮಟ್ಟದಲ್ಲಿ ಏರಿಕೆಯಾದರೆ ಅದನ್ನು ಯುದ್ಧ ನಂತರದ ಹಣದುಬ್ಬರ ಎಂದು ಕರೆಯಲಾಗುತ್ತದೆ. ಅಥವಾ ಯುದ್ಧ ಮುಗಿದ ನಂತರ ಅಸ್ತಿತ್ವಕ್ಕೆ ಬರುವ ಸನ್ನಿವೇಶದ ಕಾರಣದಿಂದಾಗಿ ಸಂಭವಿಸುವ ಬೆಲೆ ಏರಿಕೆಯನ್ನು ಯುದ್ಧಾನಂತರದ ಹಣದುಬ್ಬರ ಎನ್ನುವರು.

3. **ಹಣದುಬ್ಬರದ ಇತರೆ ವಿಧಗಳು:** ಹಣದುಬ್ಬರದ ಇತರೆ ವಿಧಾನಗಳಲ್ಲಿ ಪ್ರಮುಖವಾಗಿ ಬೇಡಿಕೆ ಸೆಳೆತದ ಹಣದುಬ್ಬರ ಮತ್ತು ವೆಚ್ಚ-ಪ್ರೇರಿತ ಹಣದುಬ್ಬರ ಆಗಿರುತ್ತದೆ.

i) **ಬೇಡಿಕೆ ಸೆಳೆತದ ಹಣದುಬ್ಬರ:** ಬೇಡಿಕೆ ಸೆಳೆತದ ಹಣದುಬ್ಬರವನ್ನು ಸಾಮಾನ್ಯವಾಗಿ 'ಅತಿ ಹೆಚ್ಚಿನ ಪ್ರಮಾಣದ ಹಣವು ಅತಿ ಕಡಿಮೆ ಸರಕುಗಳನ್ನು ಹಿಂಬಾಲಿಸುವ ಪರಿಸ್ಥಿತಿ' ಎಂದು ವಿವರಿಸಲಾಗಿದೆ. ಇದು ಪ್ರಸ್ತುತ ಅಸ್ತಿತ್ವದಲ್ಲಿರುವ ಬೆಲೆಗಳಲ್ಲಿ ಸರಕು ಮತ್ತು ಸೇವೆಗಳ ಬೇಡಿಕೆಯು, ಅವುಗಳ ಪೂರೈಕೆಗಿಂತ ಅಧಿಕವಾಗಿರುವ ಕಾರಣದಿಂದ ಉಂಟಾಗುವ ಸಾಮಾನ್ಯ ಬೆಲೆಗಳ ಮಟ್ಟದಲ್ಲಿನ ಏರಿಕೆಯಿಂದಾಗುವ ಪರಿಸ್ಥಿತಿಯಾಗಿದೆ.

ii) **ವೆಚ್ಚ-ಪ್ರೇರಿತ ಹಣದುಬ್ಬರ:** ಕೂಲಿ ಮತ್ತು ಲಾಭಗಳನ್ನು ಒಳಗೊಂಡಂತೆ ಉತ್ಪಾದನಾ ವೆಚ್ಚಗಳಲ್ಲಿನ ಏರಿಕೆಯು ವೆಚ್ಚ ಪ್ರೇರಿತ ಹಣದುಬ್ಬರಕ್ಕೆ ಕಾರಣವಾಗುತ್ತದೆ. ವೆಚ್ಚದಲ್ಲಿನ ಏರಿಕೆಯು ಹಣದುಬ್ಬರವನ್ನು ಹೆಚ್ಚಿಸುತ್ತದೆ. ಇದನ್ನು ವೆಚ್ಚ ಪ್ರೇರಿತ ಹಣದುಬ್ಬರ ಎನ್ನುವರು.

## ಹಣದುಬ್ಬರಕ್ಕೆ ಕಾರಣಗಳು:

ಬೇಡಿಕೆ ಮತ್ತು ಪೂರೈಕೆಯ ಸಂಗತಿಗಳೆರಡೂ ಹಣದುಬ್ಬರಕ್ಕೆ ಕಾರಣವಾಗುತ್ತವೆ. ಬೇಡಿಕೆಯ ಹೆಚ್ಚಳಕ್ಕೆ ಕಾರಣವಾಗುವ ಅಂಶಗಳಲ್ಲಿನ ಏರಿಕೆಯನ್ನು ಬೇಡಿಕೆ ಸೆಳೆತದ ಹಣದುಬ್ಬರ ಎಂದು ಕರೆಯಲಾಗುತ್ತದೆ. ಹಾಗೆಯೇ, ಪೂರೈಕೆಯ ಪರವಾಗಿ ಕಾರ್ಯನಿರ್ವಹಿಸುವ ಅಂಶಗಳನ್ನು ವೆಚ್ಚ ಪ್ರೇರಿತ ಹಣದುಬ್ಬರ ಎಂದು ಕರೆಯಲಾಗುತ್ತದೆ. ಇವುಗಳನ್ನು ಈ ಕೆಳಗೆ ಚರ್ಚಿಸಲಾಗಿದೆ.

A) **ಬೇಡಿಕೆಯ ಕಡೆಗಿನ ಅಂಶಗಳು:** ಬೇಡಿಕೆ ಹೆಚ್ಚಳಕ್ಕೆ ಕಾರಣವಾಗುವ ಪ್ರಮುಖ ಅಂಶಗಳೆಂದರೆ:

ಉತ್ಪನ್ನದಲ್ಲಿನ ಏರಿಕೆಗಿಂತ ಹಣದ ಪೂರೈಕೆಯಲ್ಲಿನ ಹೆಚ್ಚಳ
ವೆಚ್ಚ ಮತ್ತು ಖಾಸಗಿ ಹೂಡಿಕೆಯಲ್ಲಿನ ಹೆಚ್ಚಳ

ು ಮತ್ತು ಇತರೆ ಹಣಕಾಸಿನ ಲಾಭಗಳಲ್ಲಿನ ಹೆಚ್ಚಳವು ಜನರಲ್ಲಿ ಲಭ್ಯವಿರುವ ಹಣದ
ನ್ನು ಹೆಚ್ಚಿಸುತ್ತದೆ.

ರಕುಗಳು ಮತ್ತು ಸೇವೆಗಳಿಗೆ ಹೆಚ್ಚಿನ ವಿದೇಶಿ ಬೇಡಿಕೆ

ಖ್ಯೆಯಲ್ಲಿನ ಹೆಚ್ಚಳ
ದ ಕೊರತೆಯ ಮುಂಗಡ ಪತ್ರ

ಳಿಕೆಯಲ್ಲಿನ ಹೆಚ್ಚಳ

**B) ಪೂರೈಕೆ ಕಡೆಗಿನ ಅಂಶಗಳು:** ಹಣದುಬ್ಬರಕ್ಕೆ ಕಾರಣವಾಗುವ ಪ್ರಮುಖ ಪೂರೈಕೆ ಕಡೆಗಿನ ಅಂಶಗಳೆಂದರೆ:

1. ಉತ್ಪಾದನಾ ವೆಚ್ಚದಲ್ಲಿನ ಹೆಚ್ಚಳ
2. ಹಣರೂಪಿ ಕೂಲಿ ದರದಲ್ಲಿನ ಹೆಚ್ಚಳವು ಉತ್ಪಾದನಾ ವೆಚ್ಚವನ್ನು ಹೆಚ್ಚಿಸುತ್ತದೆ
3. ಶ್ರಮದ ಕೊರತೆ
4. ಬಂಡವಾಳ, ಯಂತ್ರೋಪಕರಣಗಳು, ಕಚ್ಚಾಸರಕುಗಳು ಮತ್ತು ಇತರ ಆದಾನಗಳ ಕೊರತೆ
5. ಆರ್ಥಿಕತೆಯಲ್ಲಿ ಪ್ರಮುಖ ಅನುಭೋಗಿ ಮತ್ತು ಬಂಡವಾಳ ಸರಕುಗಳ ಪೂರೈಕೆಯಲ್ಲಿನ ಇಳಿಕೆ
6. ಬರಗಾಲ, ಪ್ರವಾಹ ಮತ್ತು ಇತರೆ ಪ್ರಾಕೃತಿಕ ವಿಪತ್ತುಗಳ ಕಾರಣದಿಂದ ಕೃಷಿ ಉತ್ಪಾದನೆಯಲ್ಲಿನ ಅನಿರೀಕ್ಷಿತ ಇಳಿಕೆ

## ಹಣದುಬ್ಬರದ ಪರಿಣಾಮಗಳು:

ಅತಿ ಹೆಚ್ಚಿನ ದರದ ಹಣದುಬ್ಬರವು ಜನರನ್ನು, ಅವರ ಗಳಿಕೆಯ ಸಾಮರ್ಥ್ಯವನ್ನು ಮತ್ತು ಕೊಳ್ಳುವ ಶಕ್ತಿಯನ್ನು ಪ್ರತಿಕೂಲವಾಗಿ ಪ್ರಭಾವಿಸುವುದಲ್ಲದೇ, ಆರ್ಥಿಕ ವ್ಯವಸ್ಥೆಯಲ್ಲಿನ ಜನರ ನಡುವಿನ ಆದಾಯದ ಹಂಚಿಕೆ ಮತ್ತು ಭವಿಷ್ಯದ ಹೂಡಿಕೆಯ ಮೇಲೂ ಪ್ರತಿಕೂಲ ಪರಿಣಾಮಗಳನ್ನು ಬೀರುತ್ತದೆ. ಅನೇಕ ಸರ್ಕಾರಗಳು ಸತತವಾದ ಅಧಿಕ ಹಣದುಬ್ಬರವು ಅನೇಕ ಆರ್ಥಿಕ ಮತ್ತು ಸಾಮಾಜಿಕ ದುಷ್ಪರಿಣಾಮಗಳನ್ನು ಬೀರುತ್ತದೆ ಎಂದು ನಂಬುತ್ತವೆ. ಹಣದುಬ್ಬರದ ಪರಿಣಾಮಗಳನ್ನು ಈ ಕೆಳಗಿನಂತೆ ಚರ್ಚಿಸಬಹುದು.

**A) ಉತ್ಪಾದನೆಯ ಮೇಲಿನ ಪರಿಣಾಮ:** ಸಾಮಾನ್ಯ ದರದ ಹಣದುಬ್ಬರವು ಸಾಮಾನ್ಯವಾಗಿ ಆರ್ಥಿಕತೆಯಲ್ಲಿ ಉತ್ಪಾದನೆಯನ್ನು ಉತ್ತೇಜಿಸುತ್ತದೆ ಏಕೆಂದರೆ ಇದು ಉದ್ಯಮಿಗಳ ಲಾಭಾಂಶವನ್ನು ಹೆಚ್ಚಿಸುತ್ತದೆ. ಇದು ಆರ್ಥಿಕ ವ್ಯವಸ್ಥೆಯ ಉತ್ಪಾದಕ ಸಾಮರ್ಥ್ಯವನ್ನು ಹೆಚ್ಚಿಸುವ ಮೂಲಕ ಆರ್ಥಿಕತೆಯಲ್ಲಿನ ಸಂಪನ್ಮೂಲಗಳ ಬಳಕೆಗೆ ದಾರಿಯಾಗುವುದು. ಇದು ಖಾಸಗಿ ಹೂಡಿಕೆದಾರರಿಂದ ಹೂಡಿಕೆಯ ಪ್ರಮಾಣವನ್ನು ಉತ್ತೇಜಿಸಿ ಉದ್ಯೋಗ ಮತ್ತು ಆದಾಯವನ್ನು ಹೆಚ್ಚಿಸುತ್ತದೆ. ಆದ್ದರಿಂದ ಸಾಮಾನ್ಯ ದರದ ಅಥವಾ ನಿಧಾನಗತಿಯ

ಹಣದುಬ್ಬರವು ದೇಶದ ರಾಷ್ಟ್ರೀಯ ಆದಾಯ ಮತ್ತು ಉತ್ಪಾದನೆಯ ಹೆಚ್ಚಳಕ್ಕೆ ಕೊಡುಗೆ ನೀಡುತ್ತದೆ. ಆದರೆ ಮಿತಿಮೀರಿದ ಹಣದುಬ್ಬರವು ಪ್ರತಿಕೂಲ ಪರಿಣಾಮಗಳನ್ನು ಬೀರುವುದು. ಅವುಗಳೆಂದರೆ:

i. **ಅಧಿಕ ಲಾಭ: ಹಣದುಬ್ಬರದಲ್ಲಿ ಸರಕು ಮತ್ತು ಸೇವೆಗಳ ಬೆಲೆಗಳು ಉತ್ಪಾದನಾ ವೆಚ್ಚಕ್ಕಿಂತ ತೀವ್ರವಾಗಿ ಹೆಚ್ಚಳವಾಗುವ ಕಾರಣದಿಂದಾಗಿ ಉತ್ಪಾದಕರು ಅಧಿಕ ಲಾಭ ಪಡೆಯುತ್ತಾರೆ. ಇದು ಉತ್ಪಾದನಾ ಸಾಮರ್ಥ್ಯವನ್ನು ವಿಸ್ತರಿಸುತ್ತದೆ ಮತ್ತು ಬೆಲೆಗಳಲ್ಲಿನ ಏರಿಕೆಯು ಹೆಚ್ಚಿನ ಲಾಭಗಳನ್ನು ಸೃಷ್ಟಿಸುತ್ತದೆ. ಇಂತಹ ಪರಿಸ್ಥಿತಿಯಲ್ಲಿ ಹೆಚ್ಚಾದ ರಾಷ್ಟ್ರೀಯ ಆದಾಯವು ಉತ್ಪಾದಕರ ಪರವಾಗಿ ವಿತರಿಸಲ್ಪಡುತ್ತದೆ.**

ii. **ಹೂಡಿಕೆಯಲ್ಲಿ ನಿರುತ್ಸಾಹ: ಅಧಿಕ ದರದ ಹಣದುಬ್ಬರವು ಉದ್ಯಮಿಗಳ ಭವಿಷ್ಯದ ಹೂಡಿಕೆಯನ್ನು ನಿರುತ್ತೇಜನಗೊಳಿಸುವುದು. ಏಕೆಂದರೆ ಇಂತಹ ಸನ್ನಿವೇಶವು ವ್ಯಾಪಾರದಲ್ಲಿನ ಗಂಡಾಂತರಗಳನ್ನು ಹೆಚ್ಚಿಸುತ್ತದೆ.**

iii. **ಹೆಚ್ಚಾಗುವ ವೆಚ್ಚಗಳು: ಹೆಚ್ಚುತ್ತಿರುವ ಬೆಲೆಯ ಮಟ್ಟವು ಉತ್ಪಾದನಾ ವೆಚ್ಚವನ್ನು ಹೆಚ್ಚಿಸುತ್ತದೆ. ಇದು ಆರ್ಥಿಕತೆಯಲ್ಲಿನ ಹೂಡಿಕೆ ಮತ್ತು ಉತ್ಪಾದನೆಯನ್ನು ಕುಂಠಿತಗೊಳಿಸುತ್ತದೆ.**

iv. **ಸರಕುಗಳ ಅಕ್ರಮ ದಾಸ್ತಾನು: ಉದ್ಯಮಿಗಳು ಮತ್ತು ರೈತರು ಭವಿಷ್ಯದಲ್ಲಿ ಇನ್ನೂ ಹೆಚ್ಚಿನ ಬೆಲೆ ಮತ್ತು ಲಾಭದ ನಿರೀಕ್ಷೆಯಿಂದ ಸರಕುಗಳನ್ನು ದಾಸ್ತಾನು ಮಾಡುತ್ತಾರೆಯೇ ಹೊರತು ಮಾರುವುದಿಲ್ಲ. ಇದರಿಂದಾಗಿ ಅಗತ್ಯ ವಸ್ತುಗಳ ಕೃತಕ ಅಭಾವ ಸೃಷ್ಟಿಯಾಗಿ ಜನರಿಗೆ ಇನ್ನಷ್ಟು ತೊಂದರೆಯಾಗುತ್ತದೆ.**

v. **ಹೂಡಿಕೆಗೆ ಕಡಿಮೆಯಾಗುವ ಉಳಿತಾಯ: ಮಿತಿಮೀರಿದ ಹಣದುಬ್ಬರವು ನೈಜ ಬಡ್ಡಿದರವನ್ನು ಕಡಿಮೆಗೊಳಿಸುವುದರಿಂದ (ನಾಮಮಾತ್ರ ಬಡ್ಡಿಯ ದರ - ಹಣದುಬ್ಬರದ ದರ) ಜನರ ಉಳಿತಾಯವನ್ನು ಪ್ರೋತ್ಸಾಹಿಸುವುದಿಲ್ಲ. ಆದ್ದರಿಂದ ಹೂಡಿಕೆಗೆ ಲಭ್ಯವಿರುವ ಹಣದ ಪ್ರಮಾಣವು ಕಡಿಮೆಯಾಗುತ್ತದೆ.**

**B) ಆದಾಯ ವಿತರಣೆಯ ಮೇಲಿನ ಪರಿಣಾಮ:** ವಿತರಣೆಯ ಮೇಲಿನ ಹಣದುಬ್ಬರದ ಪರಿಣಾಮವು ವ್ಯಾಪಕವಾದದ್ದು. ಇದು ಸಮಾಜದಲ್ಲಿನ ವಿವಿಧ ಗುಂಪುಗಳಾದ ಉತ್ಪಾದಕರು, ಹೂಡಿಕೆದಾರರು, ಸಾಲಿಗರು, ಸಾಲಗಾರರನ್ನು ವಿಭಿನ್ನ ರೀತಿಯಲ್ಲಿ ಪ್ರಭಾವಿಸುತ್ತದೆ.

i. **ಸ್ಥಿರ ಮತ್ತು ಕಡಿಮೆ ಆದಾಯ ಕುಟುಂಬಗಳ ಮೇಲಿನ ಪರಿಣಾಮ:** ಹಣದುಬ್ಬರವು ಸಮಾಜದಲ್ಲಿನ ಕಡಿಮೆ ಆದಾಯ ಕುಟುಂಬಗಳು ಮತ್ತು ನಿಗದಿತ ಆದಾಯ ಹೊಂದಿರುವವರು ಪಿಂಚಣಿದಾರರ ಮೇಲೆ ಪ್ರತಿಕೂಲ ಪರಿಣಾಮ ಬೀರುತ್ತದೆ. ಬೆಲೆಗಳಲ್ಲಿನ ತೀವ್ರಗತಿಯ ಹೆಚ್ಚಳವು ಈ ಜನರನ್ನು ಬೆಲೆ ಏರಿಕೆಗೆ ಪರಿಹಾರ ಪಡೆಯುವ ವರ್ಗಕ್ಕಿಂತ ಬಡವರನ್ನಾಗಿಸುತ್ತದೆ.

ii. **ನೈಜ ಆದಾಯದಲ್ಲಿ ಇಳಿಕೆ:** ಹಣದುಬ್ಬರವು ತೀವ್ರಗತಿಯಲ್ಲಿ ಹೆಚ್ಚಾದಾಗ ಹಣದ ಮೌಲ್ಯ ನಿರಂತರವಾಗಿ ಕಡಿಮೆಗೊಳ್ಳುವುದರ ಪರಿಣಾಮವಾಗಿ ನಿರ್ದಿಷ್ಟ ಪ್ರಮಾಣದ ಹಣದಿಂದ ಮೊದಲಿನಷ್ಟು ಪ್ರಮಾಣದ ಸರಕು ಮತ್ತು ಸೇವೆಗಳನ್ನು ಕೊಳ್ಳಲು ಸಾಧ್ಯವಿಲ್ಲ.

iii. **ಋಣಾತ್ಮಕ ನೈಜ ಬಡ್ಡಿದರಗಳು:** ಠೇವಣಿಗಳ ಮೇಲಿನ ಬಡ್ಡಿದರವು ಹಣದುಬ್ಬರಕ್ಕಿಂತ ಕಡಿಮೆಯಿರುವುದರಿಂದ ಹಣದುಬ್ಬರವು ಋಣಾತ್ಮಕ ಬಡ್ಡಿದರಕ್ಕೆ ಕಾರಣವಾಗುತ್ತದೆ. ತಮ್ಮ ಉಳಿತಾಯದ ಬಡ್ಡಿಯ ಆದಾಯದ ಮೇಲೆ ಅವಲಂಬಿತರಾದ ಜನರು ಮತ್ತಷ್ಟು ಬಡವರಾಗುತ್ತಾರೆ.

iv. **ಸಾಲಗಾರ ಮತ್ತು ಸಾಲಿಗರು:** ಹಣದುಬ್ಬರವು ಹಣದ ಮೌಲ್ಯ ಮತ್ತು ಕೊಳ್ಳುವ ಶಕ್ತಿಯನ್ನು ಕಡಿಮೆಗೊಳಿಸುತ್ತದೆ. ಹೆಚ್ಚುತ್ತಿರುವ ಬೆಲೆ ಮಟ್ಟಗಳು ಸಾಲಗಾರರಿಗೆ ಲಾಭದಾಯಕವಾಗಿರುತ್ತದೆ. ಏಕೆಂದರೆ ಹಣದುಬ್ಬರವು ಭವಿಷ್ಯದ ಮರುಪಾವತಿಯಲ್ಲಿ ಹಣದ ನೈಜ ಮೌಲ್ಯವನ್ನು ಕಡಿಮೆಗೊಳಿಸುತ್ತದೆ. ಏಕೆಂದರೆ ಹೆಚ್ಚುತ್ತಿರುವ ಬೆಲೆಯಮಟ್ಟವು ಸಾಲಿಗರಿಗೆ ನಷ್ಟ ಉಂಟುಮಾಡುತ್ತದೆ. ಏಕೆಂದರೆ ಇದು ಸಾಲ ನೀಡಿದ್ದಕ್ಕಿಂತ ಕಡಿಮೆ ಹಣ ಪಡೆಯುವ ಪರಿಸ್ಥಿತಿ ನಿರ್ಮಿಸುವುದು.

c) **ಹಣದುಬ್ಬರ ಮತ್ತು ಸರ್ಕಾರ:** ಸರ್ಕಾರದ ಮೇಲಿನ ಹಣದುಬ್ಬರದ ಪರಿಣಾಮವು ಈ ಕೆಳಗಿನಂತೆ ಇದೆ:

i. ಸರ್ಕಾರವು ದೊಡ್ಡ ಸಾಲಗಾರನಾದ್ದರಿಂದ ಹಣದುಬ್ಬರವು ಸರ್ಕಾರಕ್ಕೆ ಪ್ರಯೋಜನಕಾರಿಯಾಗಿದೆ.
ii. ಹಣದುಬ್ಬರದಿಂದಾಗಿ ಸರ್ಕಾರದ ನಾಮಮಾತ್ರ ತೆರಿಗೆ ಆದಾಯದ ಗಳಿಕೆಯಲ್ಲಿ ಹೆಚ್ಚಳವಾಗುವುದರಿಂದ ಸಹ ಹಣದುಬ್ಬರವು ಸರ್ಕಾರಕ್ಕೆ ಪ್ರಯೋಜನಕಾರಿಯಾಗುವುದು.

D) **ಹಣದುಬ್ಬರ ಮತ್ತು ರಫ್ತುಗಳು:** ಅನಿರೀಕ್ಷಿತ ಹಣದುಬ್ಬರದ ಕಾರಣವಾಗಿ ನಿವ್ವಳ ರಫ್ತಿನ ಪ್ರಮಾಣದಲ್ಲಿ ಇಳಿಕೆಯಾಗಬಹುದು, ಏಕೆಂದರೆ:

i. ಸ್ವದೇಶದಲ್ಲಿ ಬೆಲೆ ಏರಿಕೆಯಿಂದಾಗಿ ರಫ್ತುಗಳು ತುಟ್ಟಿಯಾಗಿ ಅವುಗಳ ರಫ್ತಿನ ಪ್ರಮಾಣ ಕಡಿಮೆಯಾಗುತ್ತದೆ.
ii. ವಿದೇಶದಲ್ಲಿ ಉತ್ಪಾದನೆಯಾದ ಸರಕುಗಳು ತುಲನಾತ್ಮಕವಾಗಿ ಅಗ್ಗವಾಗಿರುವುದರಿಂದ, ಆಮದುಗಳ ಪ್ರಮಾಣದಲ್ಲಿ ಏರಿಕೆಯಾಗುತ್ತದೆ.

E) **ಇತರೆ ಪರಿಣಾಮಗಳು:**

i. ಹಣದುಬ್ಬರದ ದರ ಹೆಚ್ಚಾದಂತೆ ಮತ್ತು ತೀವ್ರ ಏರಿಳಿತಗಳಾದರೆ ಉದ್ಯಮಿಗಳು ದೀರ್ಘಾವಧಿ ಯೋಜನೆಗಳಿಗೆ ಬದಲಿಗೆ ಅಲ್ಪಾವಧಿ ಯೋಜನೆಗಳೆಡೆ ತಮ್ಮ ಗಮನವನ್ನು ಕೇಂದ್ರಿಕರಿಸಬಹುದು.

ii. ಹಣದುಬ್ಬರದ ದರ ಹೆಚ್ಚಾದಂತೆ ಮತ್ತು ತೀವ್ರ ಏರಿಳಿತಗಳಾದರೆ ರಾಷ್ಟ್ರದ ಹಣಕಾಸು ವ್ಯವಸ್ಥೆಗೆ ಧಕ್ಕೆಯಾಗುವ ಸಾಧ್ಯತೆ ಇರುತ್ತದೆ.

ಆದುದರಿಂದ, ಹಣದುಬ್ಬರವು ಜನರನ್ನು ಮತ್ತು ಆರ್ಥಿಕ ವ್ಯವಸ್ಥೆಯನ್ನು ಅನಿಶ್ಚಿತತೆಯೆಡೆಗೆ ತಳ್ಳಿ, ವ್ಯಾಪಾರಸ್ಥರ ಮತ್ತು ಗ್ರಾಹಕರ ವಿಶ್ವಾಸವನ್ನು ಕುಂದಿಸಿ, ಅಂತರಾಷ್ಟ್ರೀಯ ಮಾರುಕಟ್ಟೆಗಳಲ್ಲಿ ಉತ್ಪಾದಕರ ಸ್ಪರ್ಧಾತ್ಮಕತೆಯನ್ನು ಕುಂದಿಸಿ, ಜನರ ಜೀವನದ ಗುಣಮಟ್ಟ ಮತ್ತು ಆದಾಯ ಅಸಮಾನತೆಯ ಮೇಲೆ ಪರಿಣಾಮ ಬೀರುವುದು.

## ಹಣದಿಳಿತ ಅಥವಾ ಹಣದ ಅನಪ್ರಸರಣ:

ಹಣದುಬ್ಬರಕ್ಕೆ ವಿರುದ್ಧವಾದುದು ಹಣದ ಅನಪ್ರಸರಣವಾಗಿದೆ. ಕ್ರೌಥರ್‌ರವರು ಹಣದ ಅನಪ್ರಸರಣವನ್ನು 'ಹಣದ ಮೌಲ್ಯ ಹೆಚ್ಚುತ್ತಿರುವ ಸ್ಥಿತಿ ಅಂದರೆ ಬೆಲೆಗಳು ಇಳಿಯುತ್ತಿರುವ ಸ್ಥಿತಿ' ಎಂದು ವ್ಯಾಖ್ಯಾನಿಸಿದ್ದಾರೆ. ಹಣದ ಅನಪ್ರಸರಣದ ಅವಧಿಯಲ್ಲಿ ಬೆಲೆಗಳು ವೆಚ್ಚಕ್ಕಿಂತ ವೇಗವಾಗಿ ಇಳಿಯತೊಡಗುತ್ತದೆ. ಇದರ ಪರಿಣಾಮವಾಗಿ ಆರ್ಥಿಕ ವ್ಯವಸ್ಥೆಯಲ್ಲಿ ಕೆಟ್ಟ ವ್ಯಾಪಾರ ಮತ್ತು ನಿರುದ್ಯೋಗದ ವಾತಾವರಣ ಉಂಟಾಗುತ್ತದೆ.

## ಹಣದ ಅನಪ್ರಸರಣ ಪರಿಣಾಮಗಳು:

ಬೆಲೆಯಲ್ಲಿನ ಇಳಿಕೆಯು ವಿವಿಧ ವಲಯಗಳ ಮೇಲೆ ವಿವಿಧ ರೀತಿಯಲ್ಲಿ ಪ್ರಭಾವ ಬೀರುವುದು. ಹಣದ ಅನಪ್ರಸರಣದ ಪರಿಣಾಮಗಳೆಂದರೆ

1. ಹಣದ ಅನಪ್ರಸರಣದ ಅವಧಿಯಲ್ಲಿ ಉದ್ಯಮಿಗಳು ಅಧಿಕ ನಷ್ಟವನ್ನು ಅನುಭವಿಸುತ್ತಾರೆ. ಏಕೆಂದರೆ, ಬೆಲೆಗಳು ವೆಚ್ಚಕ್ಕಿಂತ ವೇಗವಾಗಿ ಕಡಿಮೆಯಾಗುತ್ತಿರುತ್ತದೆ. ಇದರಿಂದಾಗಿ ಉದ್ಯಮಗಳು ಬಲವಂತವಾಗಿ ಮುಚ್ಚುವ ಪರಿಸ್ಥಿತಿ ಬಂದು ನಿರುದ್ಯೋಗ ಹೆಚ್ಚಾಗುತ್ತದೆ. ಹಣದಿಳಿತಾಯದ ಅವಧಿಯಲ್ಲಿ ಹೂಡಿಕೆದಾರರು ನಷ್ಟದ ಭಯದ ಕಾರಣದಿಂದ ಹೂಡಿಕೆ ಮಾಡುವುದಿಲ್ಲ.

2. ಹಣದ ಅನಪ್ರಸರಣದ ಅವಧಿಯಲ್ಲಿ ಹಣವು ಕಡಿಮೆ ಬಡ್ಡಿಗೆ ಲಭ್ಯವಿರುತ್ತದೆ. ಉತ್ಪಾದನಾಂಗಗಳು ಮತ್ತು ಕಚ್ಚಾವಸ್ತುಗಳ ಬೆಲೆಗಳು, ಕೂಲಿದರವು ಕಡಿಮೆಯಿರುತ್ತದೆಯಾದರೂ ಹೂಡಿಕೆ ಇರುವುದಿಲ್ಲ, ಉದ್ಯೋಗವಿರುವುದಿಲ್ಲ, ಆದಾಯವಿರುವುದಿಲ್ಲ ಹಾಗೂ ಸರಕುಗಳ ಬೇಡಿಕೆಯು ಸಹ ಕುಸಿಯುತ್ತಿರುತ್ತದೆ.

3. ಹಣದ ಅನಪ್ರಸರಣದ ಅವಧಿಯಲ್ಲಿ ನಿರ್ದಿಷ್ಟ ವೇತನಗಳಿಸುವವರು ಮತ್ತು ನಿಗದಿತ ಆದಾಯದ ಜನರು ಲಾಭ ಗಳಿಸುತ್ತಾರೆ. ಆದರೆ ಇದು ನೈಜ ಗಳಿಕೆಯಾಗಿರುವುದಿಲ್ಲ. ಏಕೆಂದರೆ ಬೆಲೆಗಳು ಕುಸಿಯುತ್ತಿರುವ ಅವಧಿಯಲ್ಲಿ ಜನರು ತಮ್ಮ ಉದ್ಯೋಗಗಳನ್ನು ಕಳೆದುಕೊಳ್ಳುವ ಸಂಭವನೀಯತೆ ಇರುತ್ತದೆ.

ಹಣದುಬ್ಬರ ಮತ್ತು ಹಣದ ಅನಪ್ರಸರಣಗಳೆರಡೂ ಯಾವುದೇ ಆರ್ಥಿಕ ವ್ಯವಸ್ಥೆಯ ಅನಿಷ್ಟಗಳಾಗಿವೆ. ಹಣದುಬ್ಬರವು ಬೆಲೆಗಳ ಏರಿಕೆಯನ್ನು ಸೂಚಿಸಿದರೆ, ಹಣದಿಳಿತವು ಬೆಲೆಗಳ ಕುಸಿತವನ್ನು ಸೂಚಿಸುತ್ತದೆ. ಸಾಮಾನ್ಯವಾಗಿ ಹಣದುಬ್ಬರವು ಆರ್ಥಿಕ ಚಟುವಟಿಕೆ ಮತ್ತು ಉದ್ಯೋಗದಲ್ಲಿನ ಹೆಚ್ಚಳದ ಲಕ್ಷಣಗಳನ್ನು, ಹಣದ ಅನಪ್ರಸರಣವು ಬೆಲೆಗಳ ಕುಸಿತ ಮತ್ತು ನಿರುದ್ಯೋಗದ ಲಕ್ಷಣಗಳನ್ನು ಹೊಂದಿದೆ.

ಆದ್ದರಿಂದ ರಾಬರ್ಟ್‌ಸನ್‌ರವರು "ಹಣವು ಮನುಕುಲದ ಹಲವು ಆಶೀರ್ವಾದಗಳ ಫಲವಾಗಿದ್ದು, ಇದನ್ನು ನಾವು ನಿಯಂತ್ರಿಸದಿದ್ದರೆ, ಇದು ಗಂಡಾಂತರ ಮತ್ತು ಗೊಂದಲದ ಮೂಲವಾಗಿ ಪರಿಣಮಿಸುತ್ತದೆ" ಎಂದು ಹೇಳಿದ್ದಾರೆ.

## ಅಭ್ಯಾಸ

**I. ಈ ಕೆಳಗಿನ ಪ್ರಶ್ನೆಗಳಿಗೆ ನಾಲ್ಕು ಪರ್ಯಾಯ ಉತ್ತರಗಳನ್ನು ಕೊಡಲಾಗಿದೆ ಅವುಗಳಲ್ಲಿ ಸೂಕ್ತವಾದ ಉತ್ತರವನ್ನು ಆರಿಸಿ ಬರೆಯಿರಿ.**

1. ಸರಕು ಮತ್ತು ಸೇವೆಗಳ ಪೂರೈಕೆಗಿಂತ ಸರಕು ಮತ್ತು ಸೇವೆಗಳ ಬೇಡಿಕೆಯ ಪ್ರಮಾಣವು ಹೆಚ್ಚಾಗುವ ಕಾರಣದಿಂದ ಉಂಟಾಗುವ ಸಾಮಾನ್ಯ ಬೆಲೆಗಳ ಮಟ್ಟದಲ್ಲಿನ ಏರಿಕೆಯ ಪರಿಸ್ಥಿತಿಯನ್ನು _______ ಎನ್ನುವರು.

ಅ) ಬೇಡಿಕೆ ಸೆಳೆತದ ಹಣದುಬ್ಬರ
ಆ) ವೆಚ್ಚ ಪ್ರೇರಿತ ಹಣದುಬ್ಬರ
ಇ) ನಾಗಾಲೋಟದ ಹಣದುಬ್ಬರ
ಈ) ಯುದ್ಧ ಕಾಲದ ಹಣದುಬ್ಬರ

2. ಸರಕು ಮತ್ತು ಸೇವೆಗಳ ಬೆಲೆಗಳು ನಿಧಾನಗತಿಯ ದರದಲ್ಲಿ ಏರುತ್ತಿದ್ದರೆ ಅದಕ್ಕೆ _______ ಎಂದು ಕರೆಯಲಾಗುತ್ತದೆ.

ಅ) ತೆವಳುವ ಹಣದುಬ್ಬರ

ಆ) ನಡೆದಾಡುವ ಹಣದುಬ್ಬರ

ಇ) ಓಡುವ ಹಣದುಬ್ಬರ

ಈ) ನಾಗಾಲೋಟದ ಹಣದುಬ್ಬರ

3. 'ಹಣದ ಮೌಲ್ಯವು ಇಳಿಯುತ್ತಿರುವ, ಅಂದರೆ ಬೆಲೆಗಳು ಹೆಚ್ಚುತ್ತಿರುವ ಸ್ಥಿತಿ' ಎಂದು ಹಣದುಬ್ಬರವನ್ನು ವ್ಯಾಖ್ಯಾನಿಸಿದವರು _______

ಅ) ಕ್ರೌಥರ್
ಆ) ಹಾಟ್ರೆ
ಇ) ಪಿಗು
ಈ) ಮಿಲ್ಟನ್ ಫ್ರೀಡ್‌ಮನ್

4. ಹಣದ ಅನಪ್ರಸರಣವು ಹಣದುಬ್ಬರದ ________ ಸನ್ನಿವೇಶವಾಗಿದೆ.
ಅ) ನೇರ
ಆ) ಅಂಥದೇ
ಇ) ವಿರುದ್ಧದ
ಈ) ಭಾಗಶ:

5. ಹಣದುಬ್ಬರವು ಬೆಲೆಗಳಲ್ಲಿನ _______ ಸೂಚಿಸಿದ ಹಾಗೆಯೇ ಹಣದಿಳಿತ ಅಥವಾ ಹಣದ ಹಣಪ್ರಸರಣವು ಬೆಲೆಗಳಲ್ಲಿನ _______ ಸೂಚಿಸುತ್ತದೆ.
ಅ) ಹೆಚ್ಚಳವನ್ನು, ಇಳಿಕೆಯನ್ನು
ಆ) ಇಳಿಕೆಯನ್ನು, ಹೆಚ್ಚಳವನ್ನು
ಇ) ಹೆಚ್ಚಳವನ್ನು, ಸಮ ಪ್ರಮಾಣವನ್ನು
ಈ) ಇಳಿಕೆಯನ್ನು, ಸಮ ಪ್ರಮಾಣವನ್ನು

**II. ಈ ಕೆಳಗಿನ ವಾಕ್ಯಗಳಲ್ಲಿ ಖಾಲಿ ಬಿಟ್ಟ ಸ್ಥಳಗಳನ್ನು ತುಂಬಿರಿ.**

1. ಅತೀ ಹೆಚ್ಚಿನ ಪ್ರಮಾಣದ ಹಣವು ಅತಿ ಕಡಿಮೆ ಸರಕುಗಳನ್ನು ಬೆನ್ನಟ್ಟುವ ಸ್ಥಿತಿ _______ ಆಗಿದೆ.
2. ಒಂದು ವೇಳೆ ಬೆಲೆಗಳು ವಾರ್ಷಿಕವಾಗಿ ಶೇ. 20 ರಿಂದ ಶೇ. 100 ರ ದರದಲ್ಲಿ ಏರಿಕೆಯಾಗುತ್ತಿದ್ದರೆ ಅಂತಹ ಸನ್ನಿವೇಶವನ್ನು _______ ಎಂದು ಕರೆಯಲಾಗುತ್ತದೆ.
3. ಹಣದಿಳಿತದ ಅವಧಿಯಲ್ಲಿ ಬೆಲೆಗಳು ವೆಚ್ಚಕ್ಕಿಂತ _______ ಇಳಿಯತೊಡಗುತ್ತದೆ.
4. ಕೂಲಿ ಮತ್ತು ಲಾಭಗಳನ್ನು ಒಳಗೊಂಡಂತೆ ವೆಚ್ಚದಲ್ಲಿನ ಏರಿಕೆಯಿಂದ _______ ಹಣದುಬ್ಬರ ಉಂಟಾಗುವುದು.
5. ಯುದ್ಧನಂತರದ ಕಾಲದಲ್ಲಿ ಸಾಮಾನ್ಯ ಬೆಲೆಗಳ ಮಟ್ಟದಲ್ಲಿನ ಹೆಚ್ಚಳವನ್ನು _______ ಎಂದು ಕರೆಯುತ್ತಾರೆ.

**III. ಈ ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

1. ಹಣದುಬ್ಬರ ಎಂದರೇನು?

2. ಹಣದ ಅನಪ್ರಸರಣವನ್ನು ವ್ಯಾಖ್ಯಾನಿಸಿ.
3. ನಾಗಲೋಟದ ಹಣದುಬ್ಬರ ಎಂದರೇನು?
4. ವೆಚ್ಚ ಪ್ರೇರಿತ ಹಣದುಬ್ಬರವನ್ನು ವ್ಯಾಖ್ಯಾನಿಸಿ.
5. ಯುದ್ಧಕಾಲದ ಹಣದುಬ್ಬರದ ಎಂದರೇನು?

**IV. ಈ ಕೆಳಗಿನ ಪ್ರಶ್ನೆಗಳಿಗೆ ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿ.**

1. ಹಣದುಬ್ಬರ ಮತ್ತು ಹಣದ ಅನಪ್ರಸರಣದ ನಡುವಿನ ವ್ಯತ್ಯಾಸವೇನು?
2. ಹಣದುಬ್ಬರಕ್ಕೆ ಕಾರಣವಾಗುವ ಅಂಶಗಳನ್ನು ಹೆಸರಿಸಿ.
3. ಕಾಲದ ಆಧಾರದ ಮೇಲೆ ಹಣದುಬ್ಬರವನ್ನು ವರ್ಗೀಕರಿಸಿ.
4. ಪೂರೈಕೆಯ ಕಡೆಗಿನ ಅಂಶಗಳ ಕೊರತೆಗೆ ಕಾರಣಗಳನ್ನು ಬರೆಯಿರಿ.
5. ಬೇಡಿಕೆ ಸೆಳೆತದ ಮತ್ತು ವೆಚ್ಚ ತಳ್ಳಿಕೆಯ ಹಣದುಬ್ಬರವನ್ನು ವ್ಯಾಖ್ಯಾನಿಸಿ.

**V. ಈ ಕೆಳಗಿನ ಪ್ರಶ್ನೆಗಳಿಗೆ ಎಂಟು ವಾಕ್ಯಗಳಲ್ಲಿ ಉತ್ತರಿಸಿ.**

1. ಹಣದುಬ್ಬರದ ವಿಧಗಳನ್ನು ವಿವರಿಸಿ.
2. ಉತ್ಪಾದನೆ ಮತ್ತು ವಿತರಣೆಯ ಮೇಲಿನ ಹಣದುಬ್ಬರದ ಪರಿಣಾಮದ ಮೇಲೆ ಟಿಪ್ಪಣಿ ಬರೆಯಿರಿ.
3. ಹಣದುಬ್ಬರದ ಕಾರಣಗಳನ್ನು ಚರ್ಚಿಸಿ.
4. ಸರ್ಕಾರ ಮತ್ತು ರಫ್ತುಗಳ ಮೇಲಿನ ಹಣದುಬ್ಬರದ ಪರಿಣಾಮದ ಮೇಲೆ ಟಿಪ್ಪಣಿ ಬರೆಯಿರಿ.
5. ಹಣದುಬ್ಬರ ಮತ್ತು ಹಣದ ಅನಪ್ರಸರಣದ ಪರಿಣಾಮಗಳನ್ನು ಚರ್ಚಿಸಿ.

**ನಿಯೋಜಿತ ಕಾರ್ಯ:**

ನಿಮಗೆ ಹತ್ತಿರವಿರುವ ತರಕಾರಿ ಮತ್ತು ಹಣ್ಣಿನ ಮಾರುಕಟ್ಟೆಗೆ ಭೇಟಿ ನೀಡಿ ಕನಿಷ್ಠ 30 ದಿನಗಳ ಅಂತರವಿರುವಂತೆ ಎರಡು ಅವಧಿಗಳಲ್ಲಿನ ಕೆಲವು ತರಕಾರಿ ಮತ್ತು ಹಣ್ಣುಗಳ ಬೆಲೆಗಳನ್ನು ಪಟ್ಟಿಮಾಡಿ ಮತ್ತು ಬೆಲೆಗಳಲ್ಲಿನ ವ್ಯತ್ಯಾಸವನ್ನು ಗುರುತಿಸಿ, ಕಾರಣಗಳನ್ನು ತಿಳಿಯಿರಿ.

ನಿಮ್ಮ ನೆರೆಹೊರೆಯವರನ್ನು ಭೇಟಿಮಾಡಿ ಮತ್ತು ಕಳೆದ ವರ್ಷದ ದೈನಂದಿನ ಸರಕುಗಳ ಬೆಲೆಗಳಲ್ಲಿನ ಬದಲಾವಣೆಯು ಹೇಗೆ ಅವರ ತಿಂಗಳ ಆಯವ್ಯಯ/ ಬಜೆಟ್‌ನ್ನು ಪ್ರಭಾವಿಸುತ್ತಿದೆ ಎಂದು ತಿಳಿದುಕೊಳ್ಳಿ.

## ಅಧ್ಯಾಯ- 9: ಹಣಕಾಸು ನೀತಿ ಮತ್ತು ಕೋಶೀಯ ನೀತಿ

"ವೈರುಧ್ಯವಾದ ಉದ್ದೇಶಗಳನ್ನು ಹೊಂದಿದ್ದು, ಅದರ ಯಶಸ್ಸು ಹಲವು ಅಂಶಗಳಿಂದ ಪ್ರಭಾವಿತವಾಗಿದ್ದು, ಹಣಕಾಸಿನ ನಿರ್ವಹಣೆಯ ಸಮಸ್ಯೆ ಒಂದು ನಿರಂತರವಾದ ಹೊಂದಿಕೊಳ್ಳುವಿಕೆಯಾಗಿದೆ." ಜೆ. ಎಸ್. ಡ್ಯೂಸೆನ್‌ಬರಿ

**ಪೀಠಿಕೆ:**

ಹಿಂದಿನ ಅಧ್ಯಾಯದಲ್ಲಿ ನೀವು ಆರ್ಥಿಕ ಚಟುವಟಿಕೆಗಳಲ್ಲಿನ ಏರಿಳಿತಗಳ ಅನಿವಾರ್ಯತೆ ಮತ್ತು ಅದು ಆರ್ಥಿಕತೆಯ ಮೇಲೆ, ಜನರ ಜೀವನ ಮಟ್ಟದ ಮೇಲೆ ಮತ್ತು ವ್ಯವಹಾರಗಳ ಮೇಲೆ ಬೀರುವ ಪ್ರತಿಕೂಲ ಪರಿಣಾಮಗಳನ್ನು ಅಧ್ಯಯನ ಮಾಡಿದ್ದೀರಿ. ಆದುದರಿಂದ, ಸರ್ಕಾರವು ಈ ಆವರ್ತಗಳ ಪ್ರತಿಕೂಲ ಪರಿಣಾಮಗಳನ್ನು ಮಿತಿಗೊಳಿಸಿ, ಆರ್ಥಿಕ ಸ್ಥಿರತೆ ಮತ್ತು ಆರ್ಥಿಕ ಬೆಳವಣಿಗೆ ಸಾಧಿಸಲು ಸೂಕ್ತ ಕ್ರಮಗಳನ್ನು ತೆಗೆದುಕೊಳ್ಳಬೇಕಾಗುತ್ತದೆ. ಇದನ್ನು ಆರ್ಥಿಕ ನೀತಿ ಎಂದು ಕರೆಯಲಾಗುತ್ತದೆ ಮತ್ತು ಸಾಮಾನ್ಯವಾಗಿ ಇದು ಹಣಕಾಸು ನೀತಿ ಮತ್ತು ಕೋಶೀಯ ನೀತಿಗಳನ್ನು ಒಳಗೊಂಡಿದೆ.

ಪ್ರಾರಂಭದಲ್ಲಿ ಆರ್ಥಿಕತೆಯಲ್ಲಿನ ಹಣದ ಪೂರೈಕೆಯನ್ನು ನಿಯಂತ್ರಿಸಿದರೆ ಆವರ್ತಗಳನ್ನೂ ನಿಯಂತ್ರಿಸಬಹುದೆಂದು ತಿಳಿಯಲಾಗಿತ್ತು, ಆದರೆ ಇತ್ತೀಚೆಗೆ ಈ ಹಣಕಾಸು ನೀತಿಯ ಜೊತೆಗೆ ತೆರಿಗೆ, ಸರ್ಕಾರಿ ವೆಚ್ಚ ಹಾಗೂ ಸಾಲಗಳನ್ನು ಒಳಗೊಂಡ ಕೋಶೀಯ ನೀತಿಯೂ ಪೂರಕವಾಗಿರಬೇಕಾದ ಅವಶ್ಯಕತೆ ಇದೆ ಎಂದು ಒಪ್ಪಲಾಗಿದೆ. ಹಾಗಾದರೆ, ಹಣಕಾಸು ನೀತಿ ಎಂದರೇನು? ಹಣಕಾಸು ನೀತಿಯ ಉದ್ದೇಶಗಳಾವುವು? ಹಣಕಾಸು ನೀತಿಯ ಸಾಧನಗಳಾವುವು? ಕೋಶೀಯ ನೀತಿಯ ಅರ್ಥವೇನು? ಕೋಶೀಯ ನೀತಿಯ ಉದ್ದೇಶಗಳೇನು? ಕೋಶೀಯ ನೀತಿಯ ಸಾಧನಗಳಾವುವು? ಈ ಅಧ್ಯಾಯದ ಉದ್ದೇಶವು ಈ ಪ್ರಶ್ನೆಗಳಿಗೆ ಉತ್ತರವನ್ನು ನೀಡುವುದು ಮತ್ತು ಭಾರತದ ಹಣಕಾಸು ನೀತಿ ಮತ್ತು ಕೋಶೀಯ ನೀತಿಯ ಪ್ರಮುಖ ವಿಷಯಗಳನ್ನು ತಿಳಿಯುವ ಉದ್ದೇಶವನ್ನು ಹೊಂದಿದೆ.

### ಹಣಕಾಸು ನೀತಿ:

**ಹಣಕಾಸು ನೀತಿಯ ಅರ್ಥ:** ಹಣಕಾಸು ನೀತಿಯು ಆರ್ಥಿಕ ನಿಯಂತ್ರಣಕ್ಕಾಗಿ ಬಳಸಲಾಗುವ ವ್ಯಾಪಕವಾದ ಮತ್ತು ಅತ್ಯಂತ ಹಳೆಯ ಸಾಧನವಾಗಿದೆ. ಇದು ಸಮಗ್ರ ಆರ್ಥಿಕ

ನೀತಿಯ ಬಹುಮುಖ್ಯ ಅಂಗವಾಗಿದೆ. ಚಲಾವಣೆಯಲ್ಲಿರುವ ಹಣದ ಗಾತ್ರವನ್ನು ವಿಸ್ತರಿಸುವ ಮತ್ತು ಕುಗ್ಗಿಸುವ ನಿರ್ವಹಣೆಯ ಕ್ರಮಗಳನ್ನು ಹಣಕಾಸು ನೀತಿ ಎಂದು ಕರೆಯಲಾಗುತ್ತದೆ. ಒಂದು ದೇಶದ ಕೇಂದ್ರ ಬ್ಯಾಂಕು (ಭಾರತದಲ್ಲಿ ಭಾರತೀಯ ರಿಸರ್ವ್ ಬ್ಯಾಂಕು- ಆರ್. ಬಿ. ಐ.) ಹಣಕಾಸು ನೀತಿಯನ್ನು ಘೋಷಿಸುವ ಮತ್ತು ಜಾರಿಗೊಳಿಸುವ ಜವಾಬ್ದಾರಿಯನ್ನು ಹೊಂದಿರುತ್ತದೆ.

## ಹಣಕಾಸು ನೀತಿಯ ವ್ಯಾಖ್ಯಾನ:

ಪ್ರೊ. ಕೆ. ಪಿ. ಕೆಂಟ್‌ರವರು ಹಣಕಾಸು ನೀತಿ ಎಂದರೆ 'ಹಣಕಾಸು ಪ್ರಾಧಿಕಾರವು ಹಣದ ಪೂರೈಕೆಯನ್ನು ನಿಯಂತ್ರಿಸುವುದು' ಎಂದು ವ್ಯಾಖ್ಯಾನಿಸಿದ್ದಾರೆ.

ಪೌಲ್ ಎನ್‌ಜಿಂಗ್‌ರವರು ಹಣಕಾಸು ನೀತಿಯನ್ನು 'ತನ್ನ ಅಧೀನದಲ್ಲಿರುವ ಸಮುದಾಯವನ್ನು ಪ್ರಭಾವಿಸುವ ಹಣಕಾಸಿನ ವ್ಯವಸ್ಥೆಯ ಕಡೆಗೆ ರಾಜಕೀಯ ಪ್ರಾಧಿಕಾರದ ಮನೋಭಾವ' ಎಂದು ವ್ಯಾಖ್ಯಾನಿಸಿದ್ದಾರೆ.

## ಹಣಕಾಸು ನೀತಿಯ ಉದ್ದೇಶಗಳು:

ಹಣಕಾಸು ನೀತಿಯ ಪ್ರಮುಖ ಉದ್ದೇಶಗಳೆಂದರೆ, 1) ಪೂರ್ಣೋದ್ಯೋಗ, 2) ಬೆಲೆ ಸ್ಥಿರತೆ, 3) ವಿನಿಮಯ ದರದಲ್ಲಿನ ಸ್ಥಿರತೆ ಮತ್ತು 4) ಆರ್ಥಿಕ ಬೆಳವಣಿಗೆ ಸಾಧಿಸುವುದಾಗಿದೆ. ಇವುಗಳ ಕುರಿತು ಈ ಕೆಳಗೆ ಚರ್ಚಿಸಲಾಗಿದೆ.

1. **ಪೂರ್ಣೋದ್ಯೋಗ:** ಹಣದ ಪೂರೈಕೆಯನ್ನು ನಿಯಂತ್ರಿಸಿ ಸೂಕ್ತ ಚಟುವಟಿಕೆಗಳಿಗೆ ನಿರ್ದೇಶಿಸುವಿಕೆಯ ಮೂಲಕ ಸಂಪನ್ಮೂಲಗಳ ಪೂರ್ಣೋದ್ಯೋಗವನ್ನು ಸಾಧಿಸುವುದು ಹಣಕಾಸು ನೀತಿಯ ಪ್ರಮುಖ ಉದ್ದೇಶವೆಂದು ಪರಿಗಣಿಸಲಾಗಿದೆ. ಭೂಮಿ, ಶ್ರಮ, ಬಂಡವಾಳ ಮತ್ತು ಸಂಘಟನೆಯ ಹಾಗೂ ಆರ್ಥಿಕ ವ್ಯವಸ್ಥೆಯಲ್ಲಿ ಲಭ್ಯವಿರುವ ಇತರೆ ಸಂಪನ್ಮೂಲಗಳ ಆದರ್ಶ ಬಳಕೆಯನ್ನು ಸಾಧಿಸಿ ರಾಷ್ಟ್ರೀಯ ಆದಾಯವನ್ನು ಹೆಚ್ಚಿಸುವುದನ್ನು ಪೂರ್ಣೋದ್ಯೋಗ ಎನ್ನಲಾಗುತ್ತದೆ.
2. **ಬೆಲೆ ಸ್ಥಿರತೆ:** ಬೆಲೆ ಸ್ಥಿರತೆಯು ಹಣಕಾಸು ನೀತಿಯ ಮತ್ತೊಂದು ಪ್ರಮುಖ ಉದ್ದೇಶವಾಗಿದೆ. ಬೆಲೆಯ ಮಟ್ಟಗಳಲ್ಲಿನ ಏರಿಳಿತವು ಆರ್ಥಿಕ ಚಟುವಟಿಕೆಗಳ ಏರಿಳಿತಗಳಿಗೆ ಕಾರಣವಾಗುತ್ತದೆ. ಒಂದು ವೇಳೆ ಬೆಲೆಗಳು ತೀವ್ರವಾಗಿ ಏರುತ್ತಿದ್ದರೆ ಅಥವಾ ಕುಸಿಯುತ್ತಿದ್ದರೆ ಆರ್ಥಿಕ ವ್ಯವಸ್ಥೆಗೆ ಹಾನಿ ಉಂಟಾಗುತ್ತದೆ. ಆದ್ದರಿಂದ, ಬೆಲೆಗಳ ಸ್ಥಿರತೆಯಲ್ಲಿನ ನಿಶ್ಚಿತತೆಯು ಆರ್ಥಿಕ ಬೆಳವಣಿಗೆಗೆ ಸಹಾಯಕವಾಗುತ್ತದೆ.
3. **ವಿನಿಮಯ ದರದಲ್ಲಿ ಸ್ಥಿರತೆ:** ವಿನಿಮಯ ದರದಲ್ಲಿನ ಸ್ಥಿರತೆಯು ಹಣಕಾಸು ನೀತಿಯ ಅತ್ಯಂತ ಹಳೆಯದಾದ ಮತ್ತು ಸಾಂಪ್ರದಾಯಿಕ ಉದ್ದೇಶವೆಂದು ಪರಿಗಣಿಸಲಾಗಿದೆ.

ವಿನಿಮಯ ದರವು ಒಂದು ದೇಶದ ಕರೆನ್ಸಿಯನ್ನು ಮತ್ತೊಂದು ದೇಶದ ಕರೆನ್ಸಿಯೊಂದಿಗೆ ವಿನಿಮಯಿಸಲಾದ ದರವನ್ನು ಸೂಚಿಸುತ್ತದೆ. ವಿನಿಮಯ ದರದಲ್ಲಿನ ನಿರಂತರ ಏರಿಳಿತಗಳು ಅಂತರಾಷ್ಟ್ರೀಯ ಹಣಕಾಸಿನ ಬಿಕ್ಕಟ್ಟು ಮತ್ತು ಬೆಲೆ ಅಸ್ಥಿರತೆಗೆ ಕಾರಣವಾಗುತ್ತದೆ. ಇದು ಹಲವು ದೇಶಗಳಲ್ಲಿನ ಅಂತರಾಷ್ಟ್ರೀಯ ಹೂಡಿಕೆಯ ಸಾಮರ್ಥ ಮತ್ತು ಸಾಲಗಾರರ ಮೇಲೆ ಪ್ರತಿಕೂಲ ಪರಿಣಾಮ ಬೀರುತ್ತದೆ. ಆದ್ದರಿಂದ, ಅಂತರಾಷ್ಟ್ರೀಯ ಆರ್ಥಿಕ ಸಂಬಂಧಗಳ ಸ್ಥಿರತೆಗೆ ಮತ್ತು ಪ್ರಪಂಚದ ವಿವಿಧ ದೇಶಗಳ ನಡುವೆ ಹಣಕಾಸಿನ ಸಹಕಾರದ ಉತ್ತೇಜನಕ್ಕೆ ವಿನಿಮಯ ದರದ ಸ್ಥಿರತೆ ಅಗತ್ಯವಿದೆ.

4. **ಆರ್ಥಿಕ ಬೆಳವಣಿಗೆ:** ಆರ್ಥಿಕತೆಯ ಸುಸ್ಥಿರ ಆರ್ಥಿಕ ಬೆಳವಣಿಗೆಯು ಹಣಕಾಸು ನೀತಿಯ ಇನ್ನೊಂದು ಪ್ರಮುಖ ಉದ್ದೇಶವಾಗಿದೆ. ಆರ್ಥಿಕ ಬೆಳವಣಿಗೆಯೆಂದರೆ ನೈಜ ರಾಷ್ಟ್ರೀಯ ಆದಾಯ ಅಥವಾ ತಲಾ ಉತ್ಪನ್ನದಲ್ಲಿನ ಸುಸ್ಥಿರ ಹೆಚ್ಚಳವಾಗಿದೆ. ಹಣಕಾಸು ನೀತಿಯು ಉಳಿತಾಯ ಮತ್ತು ಬಂಡವಾಳ ಸಂಚಯನದಲ್ಲಿನ ಹೆಚ್ಚಳಕ್ಕೆ ಅನುಕೂಲಕರವಾದ ವಾತಾವರಣವನ್ನು ಸೃಷ್ಟಿಸಿ ತನ್ಮೂಲಕ ವೇಗದ ಆರ್ಥಿಕ ಬೆಳವಣಿಗೆಗೆ ಕಾರಣವಾಗುತ್ತದೆ.

## ಹಣಕಾಸು ನೀತಿಯ ಸಾಧನಗಳು:

ಆರ್ಥಿಕತೆಯಲ್ಲಿ ಹಣ ಮತ್ತು ಸಾಲದ ಪೂರೈಕೆಯನ್ನು ನಿಯಂತ್ರಿಸಿ ಅವುಗಳನ್ನು ಅನಪೇಕ್ಷಿತ ಉದ್ದೇಶಗಳಿಗೆ ಬಳಸುವುದನ್ನು ನಿರ್ಬಂಧಿಸುತ್ತದೆ. ಈ ರೀತಿಯ ಹಣದ ಪೂರೈಕೆಯ ನಿಯಂತ್ರಣ ಮತ್ತು ಅದನ್ನು ಅಗತ್ಯ ಉದ್ದೇಶಗಳಿಗೆ ನಿರ್ದೇಶಿಸುವಿಕೆಯು ಹೆಚ್ಚಿನ ಆರ್ಥಿಕ ಬೆಳವಣಿಗೆ ಮತ್ತು ಬೆಲೆ ಸ್ಥಿರತೆಯಂತಹ ಉದ್ದೇಶಗಳನ್ನು ಸಾಧಿಸಲು ಸಹಾಯಕವಾಗಿದೆ.

ನಮ್ಮ ದೇಶದಲ್ಲಿ ಭಾರತೀಯ ಕೇಂದ್ರ ಬ್ಯಾಂಕ್ ಈ ಎಲ್ಲಾ ಕಾರ್ಯಗಳನ್ನು ನಿರ್ವಹಿಸುವ ಕೇಂದ್ರ ಬ್ಯಾಂಕಾಗಿದೆ. ಭಾರತೀಯ ಕೇಂದ್ರ ಬ್ಯಾಂಕ್ ದೇಶದ ಹಣಕಾಸು ಪ್ರಾಧಿಕಾರವಾಗಿ ಕಾರ್ಯನಿರ್ವಹಿಸುತ್ತದೆ. ಭಾರತೀಯ ಕೇಂದ್ರ ಬ್ಯಾಂಕ್ ಅಳವಡಿಸಿಕೊಂಡಿರುವ ಹಣಕಾಸು ನೀತಿಯ ಸಾಧನಗಳನ್ನು ನಾವು ಚರ್ಚಿಸೋಣ. ಇವುಗಳನ್ನು ವಿಶಾಲವಾಗಿ ಎರಡು ವಿಧಗಳಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ

I. ಪರಿಮಾಣಾತ್ಮಕ ನಿಯಂತ್ರಣ ವಿಧಾನಗಳು

II. ಗುಣಾತ್ಮಕ ಅಥವಾ ಆಯ್ದು ಸಾಲ ನಿಯಂತ್ರಣ ವಿಧಾನಗಳು. ಈ ನಿಯಂತ್ರಣ ಕ್ರಮಗಳು ಬ್ಯಾಂಕುಗಳ ಸಾಲ ಸೃಷ್ಟಿ ಸಾಮರ್ಥ್ಯದ ಮೂಲಕ ಕಾರ್ಯನಿರ್ವಹಿಸುವುದರಿಂದ ಇವುಗಳನ್ನು ಸಾಮಾನ್ಯವಾಗಿ 'ಸಾಲ ನಿಯಂತ್ರಣ ಕ್ರಮಗಳು' ಎಂತಲೂ ಕರೆಯಲಾಗುತ್ತದೆ.

### *I. ಪರಿಮಾಣಾತ್ಮಕ ಸಾಲ ನಿಯಂತ್ರಣ ಕ್ರಮಗಳು:*

ಪರಿಮಾಣಾತ್ಮಕ ಸಾಲ ನಿಯಂತ್ರಣ ಕ್ರಮಗಳು ವ್ಯಾಪಾರಸ್ಥರು ಮತ್ತು ಜನರಿಗೆ ಲಭ್ಯವಿರುವ ಹಣದ ಪ್ರಮಾಣದ ಮೇಲೆ ನೇರವಾಗಿ ಪ್ರಭಾವ ಬೀರುತ್ತವೆ. ಅವುಗಳೆಂದರೆ

i. ಬ್ಯಾಂಕುದರ
ii. ಮುಕ್ತ ಮಾರುಕಟ್ಟೆ ಕಾರ್ಯಾಚರಣೆ
iii. ನಗದು ಮೀಸಲು ಅನುಪಾತ
iv. ಶಾಸನಬದ್ಧ ದ್ರವ್ಯತಾನುಪಾತ
v. ರೆಪೋ ದರ
vi. ರಿವರ್ಸ್ ರೆಪೋ ದರ.

ಇವುಗಳನ್ನು ಸಂಕ್ಷಿಪ್ತವಾಗಿ ಚರ್ಚಿಸೋಣ.

**i) ಬ್ಯಾಂಕು ದರ (BR):** ಕೇಂದ್ರ ಬ್ಯಾಂಕು ವಾಣಿಜ್ಯ ಬ್ಯಾಂಕುಗಳ ಅಂಗೀಕೃತ ವಿನಿಮಯ ಹುಂಡಿಗಳನ್ನು ಮರು ವಟ್ಟಾಯಿಸುವಿಕೆಯ ದರವನ್ನು ಬ್ಯಾಂಕು ದರ ಎನ್ನಲಾಗುತ್ತದೆ. ಇದು ಸಾಲ ನಿಯಂತ್ರಣದ ಅತ್ಯಂತ ಹಳೆಯ ವಿಧಾನಗಳಲ್ಲಿ ಒಂದಾಗಿದೆ. ಇದು ಬ್ಯಾಂಕು ದರದ ಬದಲಾವಣೆಯಿಂದಾಗಿ ಮಾರುಕಟ್ಟೆಯ ಬಡ್ಡಿ ದರಗಳಲ್ಲಿ ಬದಲಾವಣೆಯಾಗುತ್ತವೆ ಎಂಬ ಕಲ್ಪನೆಯ ಮೇಲೆ ಆಧಾರಿತವಾಗಿದೆ. ಬ್ಯಾಂಕು ದರದಲ್ಲಿನ ಹೆಚ್ಚಳವು ಬ್ಯಾಂಕುಗಳು ನೀಡುವ ಸಾಲದ ಬಡ್ಡಿ ದರವನ್ನು ಹೆಚ್ಚಿಸುತ್ತದೆ. ಮತ್ತು ಆರ್ಥಿಕತೆಯಲ್ಲಿ ಸಾಲದ ಸಂಕುಚಿತತೆಗೆ ಕಾರಣವಾಗುತ್ತದೆ. ಬ್ಯಾಂಕು ದರದಲ್ಲಿನ ಇಳಿಕೆಯು ಬಡ್ಡಿ ದರದಲ್ಲಿನ ಇಳಿಕೆಗೆ ಕಾರಣವಾಗಿ ಸಾಲ ವಿಸ್ತರಣೆಗೂ ಕಾರಣವಾಗುತ್ತದೆ.

**ii) ಮುಕ್ತ ಮಾರುಕಟ್ಟೆ ಕಾರ್ಯಾಚರಣೆ (OMO):** ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ ಲಭ್ಯವಿರುವ ಹಣದ ಪ್ರಮಾಣವನ್ನು ವಿಸ್ತರಿಸುವ ಅಥವಾ ಸಂಕುಚಿಸುವ ಉದ್ದೇಶದಿಂದ ಕೇಂದ್ರ ಬ್ಯಾಂಕು ಸರ್ಕಾರಿ ಭದ್ರತೆಗಳನ್ನು ಮುಕ್ತ ಮಾರುಕಟ್ಟೆಯಲ್ಲಿ ಮಾರುವ ಮತ್ತು ಕೊಳ್ಳುವಿಕೆಯ ಕಾರ್ಯಾಚರಣೆಯನ್ನು ಮುಕ್ತ ಮಾರುಕಟ್ಟೆ ಕಾರ್ಯಾಚರಣೆ ಎನ್ನಲಾಗುತ್ತದೆ. ಆರ್.ಬಿ.ಐ.ನ ಭದ್ರತೆಗಳ ಖರೀದಿಯು ಬ್ಯಾಂಕಿಂಗ್ ವ್ಯವಸ್ಥೆಗೆ ಹೆಚ್ಚಿನ ಹಣವನ್ನು ಒದಗಿಸಿದರೆ, ಭದ್ರತಾ ಪತ್ರಗಳ ಮಾರಾಟವು ಬ್ಯಾಂಕಿಂಗ್ ವಲಯದ ದ್ರವ್ಯತೆಯನ್ನು ಕಡಿಮೆ ಮಾಡುತ್ತದೆ. ಈ ನೀತಿಯು ಹಣದ ಪೂರೈಕೆಯಲ್ಲಿನ ಅನಿರ್ಬಂಧಿತ ಹೆಚ್ಚಳವನ್ನು ತಡೆಯುವ ಗುರಿಯನ್ನು ಹೊಂದಿದೆ. ಇದು ಬಡ್ಡಿದರಗಳನ್ನು ಪ್ರಭಾವಿಸುವುದಿಲ್ಲವಾದ್ದರಿಂದ ಈ ತಂತ್ರವು ಬ್ಯಾಂಕುದರ ನೀತಿಗಿಂತ ಉನ್ನತಮಟ್ಟದ್ದಾಗಿದೆ.

**iii) ನಗದು ಮೀಸಲು ಅನುಪಾತ (CRR):** ವಾಣಿಜ್ಯ ಬ್ಯಾಂಕುಗಳು ತಮ್ಮ ಠೇವಣಿಗಳ ನಿರ್ದಿಷ್ಟ ಪ್ರಮಾಣವನ್ನು ಕೇಂದ್ರ ಬ್ಯಾಂಕಿನಲ್ಲಿ (ಆರ್. ಬಿ. ಐ.) ನಗದು ರೂಪದಲ್ಲಿ ಮೀಸಲಿಡುವುದನ್ನು ನಗದು ಮೀಸಲು ಅನುಪಾತ ಎಂದು ಕರೆಯುತ್ತೇವೆ. ಇದು ಒಂದು ನಿರ್ದಿಷ್ಟ ಅವಧಿಯಲ್ಲಿ ವಾಣಿಜ್ಯ ಬ್ಯಾಂಕುಗಳು ಕೇಂದ್ರ ಬ್ಯಾಂಕಿನಲ್ಲಿ (ಆರ್. ಬಿ. ಐ.) ಇಡಲೇಬೇಕಾದ ಕನಿಷ್ಠ ಪ್ರಮಾಣದ ನಗದು ಹಣವಾಗಿದೆ. ಕೇಂದ್ರ ಬ್ಯಾಂಕು ಆರ್ಥಿಕ ವ್ಯವಸ್ಥೆಯಿಂದ ಹೆಚ್ಚಿನ ದ್ರವ್ಯತೆಯನ್ನು ಹೊರಸೂಸಲು ಅಥವಾ ಆರ್ಥಿಕತೆಯ ಬೆಳವಣಿಗೆಗೆ ಅಗತ್ಯವಾದ ಹೆಚ್ಚುವರಿ ಹಣವನ್ನು ಬಿಡುಗಡೆಗೊಳಿಸಲು ನಗದು ಮೀಸಲು ಅನುಪಾತವನ್ನು

ಬಳಸಿಕೊಳ್ಳುತ್ತದೆ. ಉದಾಹರಣೆಗೆ ಭಾರತೀಯ ಕೇಂದ್ರ ಬ್ಯಾಂಕು (ಆರ್. ಬಿ. ಐ.) ನಗದು ಮೀಸಲು ಅನುಪಾತದ ಪ್ರಮಾಣವನ್ನು ಶೇ. 5 ರಿಂದ 4 ಕ್ಕೆ ಕಡಿಮೆಗೊಳಿಸಿದಾಗ, ವಾಣಿಜ್ಯ ಬ್ಯಾಂಕುಗಳು ಆರ್. ಬಿ. ಐ.ನಲ್ಲಿ ಇಡಬೇಕಾಗಿರುವ ನಗದಿನ ಪ್ರಮಾಣ ಕಡಿಮೆಯಾಗಿ ತಮ್ಮ ಸಾಲದ ವ್ಯವಹಾರಕ್ಕೆ ಲಭ್ಯವಿರುವ ಹಣದ ಪ್ರಮಾಣವು ಹೆಚ್ಚಾಗುತ್ತದೆ. ಹಾಗೆಯೇ ಆರ್. ಬಿ. ಐ. ನಗದು ಮೀಸಲು ಅನುಪಾತವನ್ನು ಹೆಚ್ಚಿಸಲು ನಿರ್ಧರಿಸಿದರೆ, ಬ್ಯಾಂಕುಗಳ ಬಳಿ ಲಭ್ಯವಿರುವ ಹಣದ ಪ್ರಮಾಣವು ಕಡಿಮೆಯಾಗಿ ಅವುಗಳು ಸಾಲ ನೀಡುವ ಸಾಮರ್ಥ್ಯವು ಸಹ ಕಡಿಮೆಯಾಗುತ್ತದೆ.

**iv) ಶಾಸನಬದ್ಧ ದ್ರವ್ಯತಾ ಅನುಪಾತ (SLR):** ವಾಣಿಜ್ಯ ಬ್ಯಾಂಕುಗಳು ಗ್ರಾಹಕರಿಗೆ ಸಾಲ ನೀಡುವ ಮುನ್ನ ತಮ್ಮ ಒಟ್ಟು ಠೇವಣಿಗಳ ನಿರ್ದಿಷ್ಟ ಶೇಕಡವಾರು ಪ್ರಮಾಣವನ್ನು ಚಿನ್ನ ಅಥವಾ ಸರ್ಕಾರದ ಅಂಗೀಕೃತ ಭದ್ರತೆಗಳ ರೂಪದಲ್ಲಿ ತಮ್ಮ ಬಳಿಯೇ ಇಟ್ಟುಕೊಳ್ಳುವ ಅಗತ್ಯವಿದೆ. ಇದನ್ನು ಶಾಸನಬದ್ಧ ದ್ರವ್ಯತಾ ಅನುಪಾತ ಎಂದು ಕರೆಯಲಾಗುತ್ತದೆ. ಇದನ್ನು ವಾಣಿಜ್ಯ ಬ್ಯಾಂಕುಗಳು ತಮ್ಮ ಬಳಿ ಲಭ್ಯವಿರುವ ಒಟ್ಟು ಠೇವಣಿಯ ಶೇಕಾಡವಾರಿನಲ್ಲಿ ವ್ಯಕ್ತಪಡಿಸಲಾಗುತ್ತದೆ. ಇದು ಕೂಡ ನಗದು ಮೀಸಲು ಅನುಪಾತದಂತಯೇ ಕಾರ್ಯನಿರ್ವಹಿಸುವುದು. ಶಾಸನಬದ್ಧ ದ್ರವ್ಯತಾ ಅನುಪಾತದಲ್ಲಿನ ಹೆಚ್ಚಳವು ಸಾಲದ ಪೂರೈಕೆ ಸಾಮರ್ಥ್ಯವನ್ನು ಸಂಕುಚಿಸುತ್ತದೆ ಮತ್ತು ಶಾಸನಬದ್ಧ ದ್ರವ್ಯತಾ ಅನುಪಾತದಲ್ಲಿನ ಇಳಿಕೆಯು ಸಾಲ ನೀಡುವ ಸಾಮರ್ಥ್ಯವನ್ನು ವಿಸ್ತರಿಸುತ್ತದೆ.

**v) ರೆಪೋ ದರ (RR):** ವಾಣಿಜ್ಯ ಬ್ಯಾಂಕುಗಳ ನಿಧಿಯಲ್ಲಿ ಯಾವುದೇ ಕೊರತೆ ಉಂಟಾದಾಗ ಅವುಗಳು ತಮ್ಮ ಭದ್ರತೆಗಳ ಆಧಾರದ ಮೇಲೆ ಕೇಂದ್ರ ಬ್ಯಾಂಕಿನಿಂದ (ನಮ್ಮ ದೇಶದಲ್ಲಿ ಆರ್.ಬಿ.ಐ.) ಸಾಲ ಪಡೆಯಬಹುದು. ವಾಣಿಜ್ಯ ಬ್ಯಾಂಕುಗಳಿಗೆ ಕೇಂದ್ರ ಬ್ಯಾಂಕು ಸಾಲ ನೀಡುವ ದರವನ್ನು ರೆಪೋ ದರ ಎಂದು ಕರೆಯಲಾಗುತ್ತದೆ. ಒಂದು ವೇಳೆ ಕೇಂದ್ರ ಬ್ಯಾಂಕು ರೆಪೋ ದರವನ್ನು ಹೆಚ್ಚಿಸಿದರೆ, ಇದು ವಾಣಿಜ್ಯ ಬ್ಯಾಂಕುಗಳಿಗೆ ಸಾಲವನ್ನು ದುಬಾರಿಗೊಳಿಸುತ್ತದೆ. ಇದು ಹಣದುಬ್ಬರವನ್ನು ನಿಯಂತ್ರಿಸುವ ಸಾಧನವಾಗಿ, ಹಣದ ಲಭ್ಯತೆಯನ್ನು ನಿಯಂತ್ರಿಸುವ ದೃಷ್ಟಿಯಿಂದ ರೆಪೋ ದರವನ್ನು ಹೆಚ್ಚಿಸಿ ಕೇಂದ್ರ ಬ್ಯಾಂಕಿನಿಂದ ಪಡೆಯುವ ಸಾಲವನ್ನು ದುಬಾರಿಯಾಗಿಸುವುದು. ಹಣದಿಳಿತದ ಅವಧಿಯಲ್ಲಿ, ಕೇಂದ್ರ ಬ್ಯಾಂಕು ರೆಪೋದರವನ್ನು ಕಡಿಮೆಗೊಳಿಸುವ ಮೂಲಕ ಸಾಲ ಲಭ್ಯತೆ ಮತ್ತು ಬೆಳವಣಿಗೆಯನ್ನು ಪ್ರೋತ್ಸಾಹಿಸುತ್ತದೆ.

**vi) ರಿವರ್ಸ್ ರೆಪೋ ದರ (RRr):** ಕೇಂದ್ರ ಬ್ಯಾಂಕು (ನಮ್ಮ ದೇಶದಲ್ಲಿ ಆರ್. ಬಿ. ಐ.) ವಾಣಿಜ್ಯ ಬ್ಯಾಂಕುಗಳಿಂದ ಪಡೆಯುವ ಸಾಲದ ಮೇಲಿನ ಬಡ್ಡಿಯ ದರಕ್ಕೆ ರಿವರ್ಸ್ ರೆಪೋ ದರ ಎನ್ನಲಾಗುತ್ತದೆ. ಒಂದು ವೇಳೆ ಕೇಂದ್ರ ಬ್ಯಾಂಕು ರಿವರ್ಸ್ ರೆಪೋ ದರವನ್ನು ಹೆಚ್ಚಿಸಿದರೆ, ವಾಣಿಜ್ಯ ಬ್ಯಾಂಕುಗಳು ತಮ್ಮ ಹಣವನ್ನು ಕೇಂದ್ರ ಬ್ಯಾಂಕಿನಲ್ಲಿ ಇಡಲು ಕೇಂದ್ರ ಬ್ಯಾಂಕು ಲಾಭದಾಯಕವಾದ ಬಡ್ಡಿದರವನ್ನು ನೀಡಲು ಒಪ್ಪಿದೆ ಎಂದರ್ಥವಾಗಿದೆ. ಇದರ ಪರಿಣಾಮವಾಗಿ ಬ್ಯಾಂಕುಗಳು ತಮ್ಮ ಹಣವನ್ನು ಹೆಚ್ಚಿನ ಸುರಕ್ಷತೆಯೊಂದಿಗೆ ಕೇಂದ್ರ ಬ್ಯಾಂಕಿನಲ್ಲಿ ಇಡಲು ಇಷ್ಟಪಟ್ಟರೆ ಬ್ಯಾಂಕಿನ ಗ್ರಾಹಕರಿಗೆ ಲಭ್ಯವಿರುವ ಹಣದ ಪ್ರಮಾಣವನ್ನು

ಕಡಿತಗೊಳಿಸುತ್ತದೆ. ಬ್ಯಾಂಕುಗಳಲ್ಲಿನ ಹಣದ ಪ್ರಮಾಣ ಕಡಿಮೆಯಾಗುವುದರಿಂದ ಬ್ಯಾಂಕುಗಳು ನೈಸರ್ಗಿಕವಾಗಿ ಬಡ್ಡಿದರವನ್ನು ಹೆಚ್ಚಿಸುತ್ತದೆ ಮತ್ತು ತಮ್ಮ ಸಾಲಗಾರರಿಗೆ ಹೆಚ್ಚಿನ ಬಡ್ಡಿದರ ವಿಧಿಸಬೇಕಾಗುತ್ತದೆ.

### *II. ಗುಣಾತ್ಮಕ ಅಥವಾ ಆಯ್ದು ಸಾಲ ನಿಯಂತ್ರಣದ ಕ್ರಮಗಳು:*

ಗುಣಾತ್ಮಕ ಅಥವಾ ಆಯ್ದು ಸಾಲ ನಿಯಂತ್ರಣದ ಕ್ರಮಗಳು ವಿವಿಧ ಉದ್ದೇಶಗಳಿಗಾಗಿ ಸಾಲದ ಬಳಕೆಯನ್ನು ಪ್ರಭಾವಿಸುತ್ತವೆ. ಈ ಕ್ರಮಗಳು ಅಪೇಕ್ಷಿತ ಮತ್ತು ಆದ್ಯತಾ ಉದ್ದೇಶಗಳಿಗಾಗಿ ಸಾಲವನ್ನು ಪ್ರೋತ್ಸಾಹಿಸುತ್ತವೆ ಮತ್ತು ಆದ್ಯತಾರಹಿತ ಉದ್ದೇಶಗಳಿಗಾಗಿ ಸಾಲ ನೀಡುವುದನ್ನು ನಿರುತ್ತೇಜಿಸುತ್ತದೆ. ಹೀಗೆ ಸಾಲದ ಬಳಕೆಯ ಗುಣಮಟ್ಟವನ್ನು ಪ್ರಭಾವಿಸುವುದರಿಂದ ಇವುಗಳನ್ನು ಗುಣಾತ್ಮಕ ಕ್ರಮಗಳು ಎಂದು ಕರೆಯಲಾಗುತ್ತದೆ. ಸಾಲ ನಿಯಂತ್ರಣದ ಪ್ರಮುಖ ಗುಣಾತ್ಮಕ ಕ್ರಮಗಳೆಂದರೆ:

**i. ಅಂಚಿನ ಹಣದ ಅಗತ್ಯತೆಯಲ್ಲಿ ಬದಲಾವಣೆ:** ಯಾವುದೇ ಸಾಲ ಪಡೆಯಲು ಕೆಲವು ಭದ್ರತೆಗಳನ್ನು ಒದಗಿಸುವ ಅಗತ್ಯವಿದೆ. ಸಾಲವನ್ನು ನೀಡುವ ಉದ್ದೇಶಕ್ಕಾಗಿ ಪರಿಗಣಿಸುವ ಭದ್ರತೆಯ ಶೇಕಡವಾರು ಮೌಲ್ಯವನ್ನು ಅಂಚಿನ ಅಗತ್ಯ ಹಣ ಎಂದು ಕರೆಯಲಾಗುತ್ತದೆ. ಆದುದರಿಂದ ಅಂಚಿನ ಅಗತ್ಯವೆಂದರೆ ಸಾಲದ ಮೊತ್ತದ ಎದುರು ಒದಗಿಸಲಾದ ಭದ್ರತೆಗಳ ಪ್ರಮಾಣವಾಗಿದೆ. ಆದ್ದರಿಂದ ನಿರ್ದಿಷ್ಟ ವಲಯಕ್ಕೆ ಸಾಲದ ಹಣದ ಹರಿವನ್ನು ಉತ್ತೇಜಿಸಲು ಅಥವಾ ನಿರುತ್ತೇಜಿಸುವ ಉದ್ದೇಶದಿಂದ ಅಂಚಿನ ಅಗತ್ಯವನ್ನು ಹೆಚ್ಚಿಸಬಹುದು ಅಥವಾ ಕಡಿಮೆ ಮಾಡಬಹುದು. ಇದು ಶೇ. 20 ರಿಂದ 80 ರವರೆಗೆ ಬದಲಾಯಿಸಲ್ಪಡುತ್ತದೆ. ಇದು ಕೃಷಿ ಸರಕುಗಳಿಗೆ ಶೇ. 75 ರಷ್ಟು ಅಧಿಕ ಪ್ರಮಾಣದಲ್ಲಿದೆ. ಅಂಚಿನ ಅಗತ್ಯವನ್ನು ಹೆಚ್ಚಾಗಿದ್ದರೆ ಸಾಲ ನೀಡುವ ಪ್ರಮಾಣವು ಕಡಿಮೆಯಾಗುವುದು.

**ii. ಸಾಲದ ಪಡಿತರ:** ಇದು ಕೇಂದ್ರ ಬ್ಯಾಂಕು (ನಮ್ಮ ದೇಶದಲ್ಲಿ ಆರ್. ಬಿ. ಐ.)ನ ಮತ್ತೊಂದು ಆಯ್ದು ಸಾಲ ನಿಯಂತ್ರಣದ ವಿಧಾನವಾಗಿದೆ. ಇಲ್ಲಿ ಒಂದು ನಿರ್ದಿಷ್ಟ ಬಳಕೆ ಅಥವಾ ವಲಯಕ್ಕೆ ನೀಡುವ ಸಾಲದ ಮೊತ್ತದ ಗರಿಷ್ಠ ಪ್ರಮಾಣವನ್ನು ಕೇಂದ್ರ ಬ್ಯಾಂಕು ನಿರ್ಧರಿಸುತ್ತದೆ. ಸಾಲದ ಪಡಿತರವನ್ನು ಸಾಲದ ವಿಪರೀತ ವಿಸ್ತರಣೆಯನ್ನು ತಡೆಯಲು ಪ್ರಮುಖವಾಗಿ ಬಳಸಲಾಗುವುದು.

**iii. ನೈತಿಕ ಒತ್ತಡ:** ನೈತಿಕ ಒತ್ತಡವು ಕೇಂದ್ರ ಬ್ಯಾಂಕ್ ವಾಣಿಜ್ಯ ಬ್ಯಾಂಕುಗಳ ಮನವೊಲಿಸುವ ಒಂದು ಪ್ರಮುಖ ವಿಧಾನವಾಗಿದೆ. ವಾಣಿಜ್ಯ ಬ್ಯಾಂಕುಗಳು ನಿರ್ದಿಷ್ಟ ಚಟುವಟಿಕೆಗಳಿಗೆ ನೀಡುವ ಸಾಲಗಳನ್ನು ಮತ್ತು ಮುಂಗಡಗಳನ್ನು ಕಡಿಮೆಗೊಳಿಸಲು ಕೇಂದ್ರ ಬ್ಯಾಂಕು ಮನವೊಲಿಸುತ್ತದೆ. ಕೇಂದ್ರ ಬ್ಯಾಂಕು ನಿಯತಕಾಲಿಕವಾಗಿ ಪತ್ರಗಳನ್ನು/ ನಿರ್ದೇಶನಗಳನ್ನು ಬ್ಯಾಂಕಿಗೆ ಬರೆದು ನಿರ್ದಿಷ್ಟ ಸರಕುಗಳ ಅಥವಾ ಉದ್ದೇಶಗಳ ಸಲುವಾಗಿ ನೀಡುವ ಸಾಲ ಮತ್ತು ಮುಂಗಡಗಳನ್ನು ನಿರ್ಬಂಧಿಸುತ್ತದೆ. ವಾಣಿಜ್ಯ ಬ್ಯಾಂಕುಗಳ ಅಧಿಕಾರಿಗಳೊಂದಿಗೆ ಈ ವಿಷಯವಾಗಿ ನಿಯತಕಾಲಿಕವಾಗಿ ಕೇಂದ್ರ ಬ್ಯಾಂಕು ಚರ್ಚೆಗಳನ್ನು ನಡೆಸುತ್ತದೆ.

**iv. ನೇರ ಕ್ರಮ:** ಮೇಲೆ ಸೂಚಿಸಿದ ಯಾವೊಂದೂ ವಿಧಾನವು ಪರಿಣಾಮಕಾರಿಯಾಗದಿದ್ದಾಗ ವಾಣಿಜ್ಯ ಬ್ಯಾಂಕುಗಳು ಮತ್ತು ಹಣಕಾಸಿನ ಸಂಸ್ಥೆಗಳ ವಿರುದ್ಧ ಕೇಂದ್ರ ಬ್ಯಾಂಕು ತೆಗೆದುಕೊಳ್ಳುವ ಕ್ರಮಗಳನ್ನು ಒಳಗೊಂಡಿರುತ್ತದೆ. ಈ ವಿಧಾನವು ವಾಣಿಜ್ಯ ಬ್ಯಾಂಕುಗಳಿಗೆ ಕೇಂದ್ರ ಬ್ಯಾಂಕು ನೀಡುವ ನಿರ್ದಿಷ್ಟ ಇಲ್ಲವೇ ಸಾಮಾನ್ಯ ಸೂಚನೆಗಳನ್ನು ಒಳಗೊಂಡಿರುತ್ತದೆ.

**v. ಅನುಭೋಗಿ ಸಾಲ ನಿಯಂತ್ರಣ:** ಅನುಭೋಗಿಯ ಸಾಲದಿಂದಾಗಿ ಹಣದುಬ್ಬರವು ಹೆಚ್ಚಾಗುತ್ತಿದ್ದರೆ ಅನುಭೋಗಿ ಬೇಡಿಕೆಯನ್ನು ನಿಯಂತ್ರಿಸಲು ಅನುಭೋಗಿ ಸಾಲ ನಿಯಂತ್ರಣ ಕ್ರಮವನ್ನು ಬಳಸಲಾಗುತ್ತದೆ. ಬಾಳಿಕೆ ಬರುವ ಅನುಭೋಗಿ ಸರಕುಗಳಾದ ಕಾರು, ರೆಫ್ರಿಜರೇಟರ್, ವಾಷಿಂಗ್‌ಮಿಷಿನ್, ಪೀಠೋಪಕರಣಗಳು ಇತ್ಯಾದಿಗಳನ್ನು ಕಂತುಗಳ ಆಧಾರದ ಮೇಲೆ ಸಾಲ ಪಡೆದು ಕೊಂಡುಕೊಳ್ಳುವುದಕ್ಕೆ ಅನುಭೋಗಿ ಸಾಲ ಎನ್ನುವರು.

ಹಾಗಾಗಿ ಕೇಂದ್ರ ಬ್ಯಾಂಕು ಹಣದ ಪೂರೈಕೆ ಮತ್ತು ಆರ್ಥಿಕತೆಯ ಬೆಳವಣಿಗೆಯ ಉದ್ದೇಶದಿಂದ ಮತ್ತು ಬೆಲೆಗಳ ಮೇಲೆ ಉಂಟಾಗುವ ಪರಿಣಾಮಗಳನ್ನು ನಿಯಂತ್ರಿಸಲು ಹಲವು ಕ್ರಮಗಳ ಮೂಲಕ ಸಾಲದ ಲಭ್ಯತೆಯನ್ನು ನಿರ್ಬಂಧಿಸುವ ಗುರಿಯನ್ನು ಹೊಂದಿದೆ.

## ಕೋಶೀಯ ನೀತಿ:

**ಕೋಶೀಯ ನೀತಿಯ ಅರ್ಥ:** ವ್ಯಕ್ತಿಗಳಿಗೆ ಮತ್ತು ವ್ಯವಹಾರಗಳಿಗೆ ಲಭ್ಯವಿರುವ ಆದಾಯ, ವೆಚ್ಚ ಮತ್ತು ಹಣವನ್ನು ಸರ್ಕಾರವು ತನ್ನ ತೆರಿಗೆ, ವೆಚ್ಚ ಮತ್ತು ಸಾಲ ಚಟುವಟಿಕೆಗಳ ಮೂಲಕ ನಿಯಂತ್ರಿಸುತ್ತದೆ. ಸಮಗ್ರ ಆರ್ಥಿಕ ಚಲಕಗಳನ್ನು ನಿಯಂತ್ರಿಸಲು ಸರ್ಕಾರವು ಉದ್ದೇಶ ಪೂರ್ವಕವಾಗಿ ತನ್ನ ಆದಾಯ, ವೆಚ್ಚ ಮತ್ತು ಸಾಲಗಳನ್ನು ಬದಲಾವಣೆಗೊಳಿಸುವುದಕ್ಕೆ ಕೋಶೀಯ ನೀತಿ ಎನ್ನಲಾಗುತ್ತದೆ.

ಸ್ಟಿಗ್ಲಿಟ್ಜ್ ಮತ್ತು ವಾಷ್ ರವರು ಕೋಶೀಯ ನೀತಿಯನ್ನು "ಸಮಗ್ರ ಆರ್ಥಿಕ ನೀತಿಯ ಗುರಿಗಳನ್ನು ಸಾಧಿಸಲು ಸರ್ಕಾರದ ವೆಚ್ಚ ಮತ್ತು ತೆರಿಗೆಗಳಲ್ಲಿನ ಬದಲಾವಣೆಗಳನ್ನು ವಿನ್ಯಾಸಗೊಳಿಸುವುದಾಗಿದೆ" ಎಂದು ವ್ಯಾಖ್ಯಾನಿಸಿದ್ದಾರೆ.

ಅರ್ಥರ್ ಸ್ಮಿಥ್‌ರವರು ಕೋಶೀಯ ನೀತಿಯನ್ನು 'ರಾಷ್ಟ್ರೀಯ ಆದಾಯ, ಉತ್ಪಾದನೆ ಮತ್ತು ಉದ್ಯೋಗದ ಮೇಲೆ ಅಪೇಕ್ಷಣೀಯ ಪರಿಣಾಮಗಳನ್ನು ಬೀರಲು ಮತ್ತು ಅನಪೇಕ್ಷಣೀಯ ಪರಿಣಾಮಗಳನ್ನು ತಡೆಗಟ್ಟುವ ಸಲುವಾಗಿ ಸರ್ಕಾರವು ತನ್ನ ವೆಚ್ಚ ಮತ್ತು ಆದಾಯ ಕಾರ್ಯಕ್ರಮಗಳನ್ನು ಬಳಸಿಕೊಳ್ಳುವ ನೀತಿಯಾಗಿದೆ' ಎಂದು ವ್ಯಾಖ್ಯಾನಿಸಿದ್ದಾರೆ.

### *ಕೋಶೀಯ ನೀತಿಯ ಉದ್ದೇಶಗಳು:*

ಕೋಶೀಯ ನೀತಿಯ ಸಾಮಾನ್ಯ ಉದ್ದೇಶಗಳೆಂದರೆ 1) ಸಂಪನ್ಮೂಲಗಳ ಕ್ರೋಢೀಕರಣ 2) ಉದ್ಯೋಗಾವಕಾಶಗಳ ವಿಸ್ತರಣೆ 3) ಬೆಲೆ ಸ್ಥಿರತೆ 4) ಆದಾಯದ ಅಸಮಾನತೆಯನ್ನು ಕಡಿತಗೊಳಿಸುವುದು ಮತ್ತು 5) ಆರ್ಥಿಕ ಅಭಿವೃದ್ಧಿ. ಇವುಗಳನ್ನು ಸಂಕ್ಷಿಪ್ತವಾಗಿ ಚರ್ಚಿಸೋಣ.

1. **ಸಂಪನ್ಮೂಲಗಳ ಕ್ರೋಢೀಕರಣ: ಅಭಿವೃದ್ಧಿ ಕಾರ್ಯಕ್ರಮಗಳ ಮೇಲೆ ವೆಚ್ಚ ಮಾಡಲು ಸಾಕಷ್ಟು ಹಣಕಾಸು ಸಂಪನ್ಮೂಲಗಳನ್ನು ಕ್ರೋಢೀಕರಿಸುವುದು ಕೋಶೀಯ ನೀತಿಯ ಪ್ರಮುಖ ಉದ್ದೇಶವಾಗಿದೆ. ಇದನ್ನು ತೆರಿಗೆ ದರಗಳನ್ನು ಹೆಚ್ಚಿಸುವ, ತೆರಿಗೆ ಜಾಲವನ್ನು ವಿಸ್ತರಿಸುವ ಮತ್ತು ಸಾಲವನ್ನು ಪಡೆಯುವುದರ ಮೂಲಕ ಸಾಧಿಸಲಾಗುತ್ತದೆ.**

2. **ಉದ್ಯೋಗಾವಕಾಶಗಳ ವಿಸ್ತರಣೆ: ಉದ್ಯೋಗಾವಕಾಶಗಳ ವಿಸ್ತರಣೆ ಕೋಶೀಯ ನೀತಿಯ ಮತ್ತೊಂದು ಪ್ರಮುಖ ಉದ್ದೇಶವಾಗಿದೆ. ಇದನ್ನು ಸರ್ಕಾರವು ಅಧಿಕ ವೆಚ್ಚವನ್ನು ಕೈಗೊಳ್ಳುವ ಮೂಲಕ ಮತ್ತು ಖಾಸಗಿ ವಲಯದಲ್ಲಿ ಹೂಡಿಕೆಯನ್ನು ಪ್ರೋತ್ಸಾಹಿಸುವುದರ ಮೂಲಕ ಸಾಧಿಸುತ್ತದೆ.**

3. **ಬೆಲೆ ಸ್ಥಿರತೆ: ಬೆಲೆ ಸ್ಥಿರತೆಯು ಕೋಶೀಯ ನೀತಿಯ ಮತ್ತೊಂದು ಪ್ರಮುಖ ಉದ್ದೇಶವಾಗಿದೆ. ಯಾವಾಗ ಆರ್ಥಿಕತೆಯು ಹಣದುಬ್ಬರದ ಸನ್ನಿವೇಶವನ್ನು ಎದುರಿಸುತ್ತದೆಯೋ ಆಗ ಸರ್ಕಾರವು ತನ್ನ ವೆಚ್ಚವನ್ನು ಕಡಿತಗೊಳಿಸುತ್ತದೆ ಮತ್ತು ಅಧಿಕ ತೆರಿಗೆಯ ದರವನ್ನು ವಿಧಿಸುವ ಮೂಲಕ ಜನರ ಬಳಿಯಲ್ಲಿರುವ ಹೆಚ್ಚುವರಿ ಹಣವನ್ನು ಕಡಿತಗೊಳಿಸುತ್ತದೆ. ಮತ್ತೊಂದೆಡೆ ಹಣದ ಅನಪ್ರಸರಣ ಪರಿಸ್ಥಿತಿಯಲ್ಲಿ ಸರ್ಕಾರವು ತೆರಿಗೆಗಳನ್ನು ಕಡಿಮೆಗೊಳಿಸುತ್ತದೆ ಮತ್ತು ಜನರ ಮತ್ತು ವ್ಯಾಪಾರಿಗಳ ಕೈಗೆ ಹೆಚ್ಚಿನ ಹಣವನ್ನು ಒದಗಿಸಲು ತನ್ನ ಸ್ವಂತ ಖರ್ಚನ್ನು ಅಧಿಕಗೊಳಿಸುತ್ತದೆ.**

4. **ಆದಾಯದ ಅಸಮಾನತೆಯನ್ನು ಕಡಿಮೆ ಮಾಡುವುದು: ಆರ್ಥಿಕ ಅಸಮಾನತೆಯು ಅರ್ಥವ್ಯವಸ್ಥೆಯ ಅಸ್ಥಿರತೆಗೆ ಕಾರಣವಾಗುತ್ತದೆ. ಕೋಶೀಯ ನೀತಿಯು ಆರ್ಥಿಕ ಅಸಮಾನತೆಯನ್ನು ಕಡಿಮೆಗೊಳಿಸುವ ಒಂದು ಪ್ರಬಲ ಸಾಧನವಾಗಿದೆ. ದೇಶದಲ್ಲಿನ ಆರ್ಥಿಕ ಅಸಮಾನತೆಯನ್ನು ಕಡಿಮೆಗೊಳಿಸಲು ಸರ್ಕಾರವು ಪರಿಣಾಮಕಾರಿ ತೆರಿಗೆ ನೀತಿಯನ್ನು ಬಳಸುತ್ತದೆ. ಬಡವರಿಗೆ ವ್ಯಾಪಕವಾದ ಸಹಾಯಧನಗಳನ್ನು ಒದಗಿಸುವುದು ಮತ್ತು ಬಡವರ ಕಲ್ಯಾಣ ಕಾರ್ಯಕ್ರಮಗಳ ಮೇಲೆ ವೆಚ್ಚವನ್ನು ಕೈಗೊಳ್ಳಲು ಸರ್ಕಾರವು ಪ್ರಗತಿಪರ ತೆರಿಗೆಯಮೂಲಕಶ್ರೀಮಂತ ವರ್ಗದ ಮೇಲೆ ಅಧಿಕ ದರದ ತೆರಿಗೆಯನ್ನು ವಿಧಿಸುತ್ತದೆ. ಇದು ಸಮಾಜದ ವಿವಿಧ ವರ್ಗಗಳ ನಡುವೆ ಆದಾಯ ಮತ್ತು ಸಂಪತ್ತಿನ ಮರು ವಿತರಣೆಗೆ ಕಾರಣವಾಗುತ್ತದೆ.**

5. **ಆರ್ಥಿಕ ಅಭಿವೃದ್ಧಿ: ಒಂದು ದೇಶದ ಆರ್ಥಿಕ ಅಭಿವೃದ್ಧಿಯನ್ನು ಉತ್ತೇಜಿಸುವುದು ಕೋಶೀಯ ನೀತಿಯ ಪ್ರಮುಖ ಉದ್ದೇಶವಾಗಿದೆ. ತೆರಿಗೆ, ಸ್ವದೇಶಿ ಸಾಲ ಮತ್ತು**

**ಬಾಹ್ಯ ಸಾಲಗಳು ಅಭಿವೃದ್ಧಿ ಹಣಕಾಸಿನ ಮೂಲಗಳಲ್ಲಿ ಪ್ರಮುಖವಾಗಿವೆ. ಹೂಡಿಕೆಯ ಅವಕಾಶಗಳ ವಿಸ್ತರಣೆಯು ವ್ಯವಹಾರ ಚಟುವಟಿಕೆಗಳ ಮಟ್ಟದ ಮೇಲೆ ಧನಾತ್ಮಕ ಪರಿಣಾಮ ಬೀರುತ್ತದೆ ಮತ್ತು ಇದು ದೇಶದ ಆರ್ಥಿಕ ಅಭಿವೃದ್ಧಿಗೆ ಕಾರಣವಾಗುತ್ತದೆ.**

### *ಕೋಶೀಯ ನೀತಿಯ ಸಾಧನಗಳು:*

ಕೋಶೀಯ ನೀತಿಯ ಪ್ರಮುಖ ಸಾಧನಗಳೆಂದರೆ ಸಾರ್ವಜನಿಕ ಆದಾಯ, ಸಾರ್ವಜನಿಕ ವೆಚ್ಚ, ಸಾರ್ವಜನಿಕ ಸಾಲ ಮತ್ತು ಕೊರತೆಯ ಹಣಕಾಸುಗಳಾಗಿವೆ.

**ಸಾರ್ವಜನಿಕ ಆದಾಯ:** ಇದು ಕೋಶೀಯ ನೀತಿಯ ಪ್ರಮುಖ ಸಾಧನಗಳಲ್ಲಿ ಒಂದಾಗಿದೆ. ಸಾರ್ವಜನಿಕ ಆದಾಯವು ತೆರಿಗೆ ಮತ್ತು ತೆರಿಗೆಯೇತರ ಆದಾಯಗಳನ್ನು ಒಳಗೊಂಡಿದೆ. ಸರ್ಕಾರವು ವಿವಿಧ ತೆರಿಗೆಗಳನ್ನು ವಿಧಿಸುವುದರಿಂದ ಅದಕ್ಕೆ ದೊರೆಯುವ ಆದಾಯವು ತೆರಿಗೆ ಆದಾಯವಾಗಿದೆ. ಯಾವುದೇ ನೇರ ಪ್ರತಿಫಲಾಪೇಕ್ಷೆಯಿಲ್ಲದೇ ಜನರು ಸರ್ಕಾರಕ್ಕೆ ನೀಡಬೇಕಾದ ಕಡ್ಡಾಯ ವಂತಿಗೆಯನ್ನು ತೆರಿಗೆ ಎನ್ನುವರು. ತೆರಿಗೆಗಳಲ್ಲಿ ಎರಡು ವಿಧಗಳಿದ್ದು, ಅವುಗಳೆಂದರೆ ನೇರ ತೆರಿಗೆ ಮತ್ತು ಪರೋಕ್ಷ ತೆರಿಗೆ. ಕಾನೂನುಬದ್ಧವಾಗಿ ತೆರಿಗೆಯನ್ನು ಯಾರ ಮೇಲೆ ವಿಧಿಸಲಾಗುತ್ತದೆಯೋ ಆ ವ್ಯಕ್ತಿಗಳು ಅಥವಾ ಉದ್ಯಮವು ತೆರಿಗೆಯನ್ನು ಪಾವತಿಸಿದರೆ ಅದನ್ನು ನೇರ ತೆರಿಗೆ ಎನ್ನುವರು. ವೈಯಕ್ತಿಕ ಆದಾಯ ತೆರಿಗೆ, ಕಂಪನಿ ಆದಾಯ ತೆರಿಗೆ, ಸಂಪತ್ತಿನ ತೆರಿಗೆ, ಎಸ್ಟೇಟ್ ತೆರಿಗೆ ಇತ್ಯಾದಿಗಳನ್ನು ಯಾರ ಮೇಲೆ ವಿಧಿಸಲಾಗಿರುತ್ತದೆಯೋ ಅವರೇ ಪಾವತಿಸಬೇಕು. ಇಲ್ಲಿ ತೆರಿಗೆಯ ಭಾರವನ್ನು ಇನ್ನೊಬ್ಬರಿಗೆ ವರ್ಗಾಯಿಸಲು ಸಾಧ್ಯವಿಲ್ಲ. ಮತ್ತೊಂದೆಡೆ, ಪರೋಕ್ಷ ತೆರಿಗೆಯಲ್ಲಿ ತೆರಿಗೆಯ ಭಾರವನ್ನು ಇತರರಿಗೆ ವರ್ಗಾಯಿಸಬಹುದು. ಅಂದರೆ ಇಲ್ಲಿ ತೆರಿಗೆ ವಿಧಿಸುವಿಕೆಯು ಒಬ್ಬರ ಮೇಲಿದ್ದರೆ, ವಾಸ್ತವವಾಗಿ ತೆರಿಗೆಯ ಪಾವತಿಯನ್ನು ಮತ್ತೊಬ್ಬರು ಮಾಡುತ್ತಾರೆ. ಸರಕು ಮತ್ತು ಸೇವೆಗಳ ಮೇಲಿನ ಎಲ್ಲಾ ತೆರಿಗೆಗಳು ಅಂದರೆ ಮೌಲ್ಯವರ್ಧಿತ ತೆರಿಗೆ, ಅಬಕಾರಿ ತೆರಿಗೆ, ಮಾರಾಟ ತೆರಿಗೆ, ಕಸ್ಟಮ್ಸ್ ಸುಂಕ ಇತ್ಯಾದಿಗಳು ಪರೋಕ್ಷ ತೆರಿಗೆಗಳಾಗಿವೆ.

ಸಾಮಾನ್ಯವಾಗಿ ತೆರಿಗೆಯು ಹೊರೆ ಎಂದು ಪರಿಗಣಿತವಾಗಿರುವುದರಿಂದ, ತೆರಿಗೆ ನೀತಿಯನ್ನು ದೇಶದ ಅಭಿವೃದ್ಧಿಗೆ ಸಾಕಷ್ಟು ಹಣಕಾಸಿನ ಸಂಪನ್ಮೂಲಗಳು ಲಭ್ಯವಾಗುವ ಹಾಗೆ ವಿನ್ಯಾಸಗೊಳಿಸಲಾಗುತ್ತದೆ. ಇದಲ್ಲದೇ ಜನರು ಮತ್ತು ಖಾಸಗಿ ವ್ಯಾಪಾರಸ್ಥರು ಅಧಿಕ ಆದಾಯ ಗಳಿಸುವುದಕ್ಕೆ, ಉಳಿತಾಯಕ್ಕೆ ಮತ್ತು ಹೂಡಿಕೆಗೆ ಅಗತ್ಯ ಉತ್ತೇಜನವನ್ನು ಒದಗಿಸುತ್ತದೆ. ತೆರಿಗೆ ಆದಾಯವು ಎಲ್ಲಾ ದೇಶಗಳಲ್ಲಿ ಆದಾಯದ ಪ್ರಮುಖ ಭಾಗವಾಗಿದೆ.

ತೆರಿಗೆಯೇತರ ಆದಾಯ ಎಂಬ ಪದವು ತೆರಿಗೆಯ ಮೂಲಗಳನ್ನು ಹೊರತುಪಡಿಸಿ, ಇತರೆ ಮೂಲಗಳಿಂದ ಸಂಗ್ರಹಿಸುವ ಆದಾಯವನ್ನು ಸೂಚಿಸುತ್ತದೆ. ಇದು ಪ್ರಮುಖವಾಗಿ ದಂಡ, ಶುಲ್ಕಗಳು, ಸಾರ್ವಜನಿಕ ಉದ್ಯಮಗಳಿಂದ ಬರುವ ಲಾಭಗಳು, ನಾಣ್ಯ ಮತ್ತು

ನೋಟುಗಳ ಮುದ್ರಣ, ಮತ್ತು ವಿದೇಶಗಳಿಂದ ಬರುವ ಅನುದಾನ ದೇಣಿಗೆಗಳನ್ನು ಒಳಗೊಂಡಿದೆ.

**ಸಾರ್ವಜನಿಕ ವೆಚ್ಚ:** 1930 ರ ಮಹಾ ಆರ್ಥಿಕ ಮುಗ್ಗಟ್ಟು ಮತ್ತು ಎರಡನೇ ಜಾಗತಿಕ ಯುದ್ಧದ ನಂತರದ ಅವಧಿಯಲ್ಲಿ ಅಭಿವೃದ್ಧಿ ಚಟುವಟಿಕೆಗಳಲ್ಲಿ ಸರ್ಕಾರದ ಭಾಗವಹಿಸುವಿಕೆಯು ಗಣನೀಯವಾಗಿ ಹೆಚ್ಚಳಗೊಂಡಿದೆ. ಕಲ್ಯಾಣ ರಾಜ್ಯಗಳ ಉದಯವು ದೇಶದ ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿಗಾಗಿ ಸಾರ್ವಜನಿಕ ವೆಚ್ಚವನ್ನು ಹೆಚ್ಚಳಗೊಳಿಸಿದೆ. ಸಾರ್ವಜನಿಕ ವೆಚ್ಚ ಎಂಬ ಪದವು ಜನರ ಸಾಮಾಜಿಕ ಆರ್ಥಿಕ ಕಲ್ಯಾಣದ

ಉತ್ತೇಜನಕ್ಕಾಗಿ ಸರ್ಕಾರವು ಕೈಗೊಳ್ಳುವ ವೆಚ್ಚವನ್ನು ಸೂಚಿಸುತ್ತದೆ. ಸರ್ಕಾರವು ಕೈಗೊಳ್ಳುವ ಒಟ್ಟು ಸಾರ್ವಜನಿಕ ವೆಚ್ಚವನ್ನು ಪ್ರಮುಖವಾಗಿ 1) ಅಭಿವೃದ್ಧಿ ವೆಚ್ಚ ಮತ್ತು ಅಭಿವೃದ್ಧಿಯೇತರ ವೆಚ್ಚಗಳೆಂದು ವರ್ಗೀಕರಿಸಲಾಗಿದೆ.

ಉತ್ಪಾದನೆಯನ್ನು ಉತ್ತೇಜಿಸುವ ಎಲ್ಲಾ ವೆಚ್ಚಗಳು ಅಭಿವೃದ್ಧಿ ವೆಚ್ಚಗಳಾಗಿವೆ. ಉದಾಹರಣೆಗೆ ನೀರಾವರಿ, ರಸ್ತೆ, ವಿದ್ಯುತ್ ಯೋಜನೆಗಳು, ಸಾರ್ವಜನಿಕ ಆರೋಗ್ಯ, ಶಿಕ್ಷಣ, ಸಂವಹನ, ಕೈಗಾರಿಕೆಗಳು ಇತರೆ ಮೇಲಿನ ವೆಚ್ಚಗಳು ಆರ್ಥಿಕತೆಯಲ್ಲಿ ಉತ್ಪಾದಕ ಸಾಮರ್ಥ್ಯವನ್ನು ಮತ್ತು ವ್ಯಕ್ತಿಗಳ ಆದಾಯ ಗಳಿಕೆಯ ಸಾಮರ್ಥ್ಯವನ್ನು ಸುಧಾರಿಸುತ್ತವೆ. ಅನುತ್ಪಾದಕತೆಯ ಸ್ವರೂಪ ಹೊಂದಿದ ವೆಚ್ಚಗಳಾದ ಸಹಾಯಧನ, ಪಿಂಚಣಿ, ಬಡ್ಡಿಪಾವತಿ ಮತ್ತು ಆಡಳಿತಾತ್ಮಕ ವೆಚ್ಚಗಳು ಅಭಿವೃದ್ಧಿಯೇತರ ವೆಚ್ಚಗಳಾಗಿವೆ.

**ಸಾರ್ವಜನಿಕ ಸಾಲ:** ಸಾರ್ವಜನಿಕ ಸಾಲವು ಕೋಶೀಯ ನೀತಿಯ ಮತ್ತೊಂದು ಪ್ರಮುಖ ಸಾಧನವಾಗಿದೆ. ಇದು ಅಭಿವೃದ್ಧಿಶೀಲ ದೇಶಗಳಲ್ಲಿ ಹೆಚ್ಚುವರಿ ಹಣಕಾಸಿನ ಸಂಪನ್ಮೂಲಗಳನ್ನು ಕ್ರೋಢೀಕರಿಸುವ ಸಾಧನವಾಗಿದೆ. ಸಾರ್ವಜನಿಕ ಸಾಲ ಎಂಬ ಪದವು ಸರ್ಕಾರವು ಸಾರ್ವಜನಿಕ ಆದಾಯ ಮತ್ತು ಸಾರ್ವಜನಿಕ ವೆಚ್ಚಗಳ ನಡುವಿನ ಅಂತರವನ್ನು ತುಂಬಲು ಸಾಲ ಪಡೆಯುವುದಾಗಿದೆ. ಕಡಿಮೆ ಉಳಿತಾಯ ದರ ಮತ್ತು ಕಡಿಮೆ ತಲಾ ಆದಾಯದ ಕಾರಣದಿಂದಾಗಿ ಹಲವು ಅಭಿವೃದ್ಧಿಶೀಲ ದೇಶಗಳಲ್ಲಿ ಸಾರ್ವಜನಿಕ ಆದಾಯದ ಪ್ರಮಾಣವು ಕಡಿಮೆಯಿದೆ. ಆದರೆ ಅಭಿವೃದ್ಧಿ ಚಟುವಟಿಕೆಗಳಲ್ಲಿನ ಹೆಚ್ಚಳದ ಕಾರಣದಿಂದ ಸಾರ್ವಜನಿಕ ವೆಚ್ಚವು ನಿರಂತರವಾಗಿ ಹೆಚ್ಚಳವಾಗುತ್ತಿದೆ. ಈ ಅಂತರವನ್ನು ತುಂಬಲು ಸರ್ಕಾರವು ಸಾರ್ವಜನಿಕರು ಮತ್ತು ಸಂಸ್ಥೆಗಳಿಂದ ಸಾಲವನ್ನು ಪಡೆಯುತ್ತದೆ. ಸಾರ್ವಜನಿಕ ಸಾಲವನ್ನು ಸ್ವದೇಶಿ ಸಾಲ ಮತ್ತು ವಿದೇಶಿ ಸಾಲ ಎಂದು ವರ್ಗೀಕರಿಸಲಾಗಿದೆ. ದೇಶದ ಒಳಗಡೆ ಷೇರುಗಳು ಮತ್ತು ಸಾಲಪತ್ರಗಳ ಮೂಲಕ ಸಾರ್ವಜನಿಕರು ಮತ್ತು ಸಂಸ್ಥೆಗಳಿಂದ ಪಡೆಯುವ ಸಾಲಕ್ಕೆ ಸ್ವದೇಶಿ ಸಾಲ ಎಂದು ಕರೆಯಲಾಗುತ್ತದೆ. ಹಾಗೆಯೇ ಇತರೆ ದೇಶಗಳಿಂದ ಮತ್ತು ಅಂತರಾಷ್ಟ್ರೀಯ ಸಂಸ್ಥೆಗಳಾದ ವಿಶ್ವಬ್ಯಾಂಕ್, ಅಂತರಾಷ್ಟ್ರೀಯ ಹಣಕಾಸು ನಿಧಿ, ಅಂತರಾಷ್ಟ್ರೀಯ ಹಣಕಾಸು ನಿಗಮ ಮುಂತಾದವುಗಳಿಂದ ಪಡೆಯುವ ಸಾಲವನ್ನು ವಿದೇಶಿ ಸಾಲ ಎಂದು ಕರೆಯಲಾಗುತ್ತದೆ.

**ಕೊರತೆಯ ಹಣಕಾಸು:** ಕೊರತೆಯ ಹಣಕಾಸು ಕೋಶೀಯ ನೀತಿಯ ಒಂದು ಇತ್ತೀಚಿನ ಸಾಧನವಾಗಿದೆ. ಉದ್ಯೋಗ ಮತ್ತು ಉತ್ಪನ್ನದ ಮಟ್ಟದ ಹೆಚ್ಚಳಕ್ಕೆ ಕೊರತೆಯ ಹಣಕಾಸು ಕೋಶೀಯ ನೀತಿಯ ಒಂದು ಅಸ್ತ್ರವಾಗಿದೆ ಎಂದು ಜೆ. ಎಂ. ಕೇನ್ಸ್‌ರವರು ಹೇಳಿದ್ದಾರೆ. ಕೊರತೆಯ ಹಣಕಾಸು ಎಂಬ ಪದವು ಆರ್ಥಿಕತೆಯಲ್ಲಿ ಅಧಿಕ ಹಣವನ್ನು ಮುದ್ರಿಸಿ ಅದನ್ನು ಚಲಾವಣೆಯಲ್ಲಿ ತರುವುದಾಗಿದೆ. ಸಾಲ ಸೌಲಭ್ಯ ಸಾಕಷ್ಟು ಇಲ್ಲದಿರುವಾಗ ಅಥವಾ ಕಾರ್ಯ ಸಾಧ್ಯವಾಗದಿದ್ದಾಗ ಸರ್ಕಾರವು ಹೆಚ್ಚುವರಿ ಹಣವನ್ನು ಮುದ್ರಿಸುವ ಮೂಲಕ ಬಜೆಟ್ ಕೊರತೆಯನ್ನು ಪೂರೈಸಿಕೊಳ್ಳುತ್ತದೆ. ಆದರೆ, ಈ ಸಾಧನದ ಮೇಲಿನ ಅಧಿಕವಾದ ಅವಲಂಬನೆಯು ಹಣದುಬ್ಬರದ ಪರಿಸ್ಥಿತಿಗೆ ಮತ್ತು ಇತರೆ ಅನಪೇಕ್ಷಿತ ಪರಿಣಾಮಗಳಿಗೆ ಕಾರಣವಾಗಬಹುದು. ಆದ್ದರಿಂದ ಪ್ರತಿಯೊಂದು ದೇಶವು ಕೊರತೆಯ ಹಣಕಾಸಿಗೆ ನಿರ್ದಿಷ್ಟ ಗುರಿ ನಿಗಧಿಗೊಳಿಸುವುದು ಮತ್ತು ಆ ಗುರಿಯ ಒಳಗಡೆ ಮಾತ್ರ ಕೊರತೆಯನ್ನು ಹಣಕಾಸನ್ನು ನಿರ್ವಹಿಸುತ್ತದೆ.

## ಅಭ್ಯಾಸ

### I. ಈ ಕೆಳಗಿನ ಪ್ರಶ್ನೆಗಳಿಗೆ ನಾಲ್ಕು ಪರ್ಯಾಯ ಉತ್ತರಗಳನ್ನು ಕೊಡಲಾಗಿದೆ ಅವುಗಳಲ್ಲಿ ಸೂಕ್ತವಾದ ಉತ್ತರವನ್ನು ಆರಿಸಿ ಬರೆಯಿರಿ.

1. ಪರಿಮಾಣಾತ್ಮಕ ಕ್ರಮಗಳು ಒಳಗೊಂಡಿರುವುದು _______
   ಅ) ಬ್ಯಾಂಕು ದರ
   ಆ) ಮುಕ್ತ ಮಾರುಕಟ್ಟೆ ಕಾರ್ಯಾಚರಣೆ
   ಇ) ಸಿ. ಆರ್. ಅರ್.
   ಈ) ಮೇಲಿನ ಎಲ್ಲವೂ

2. ಹಣಕಾಸಿನ ನೀತಿಯನ್ನು ನಿಯಂತ್ರಿಸುವುದು _______.
   ಅ) ಕೇಂದ್ರ ಬ್ಯಾಂಕು
   ಆ) ಕೇಂದ್ರ ಸರ್ಕಾರ
   ಇ) ರಾಜ್ಯ ಸರ್ಕಾರ
   ಈ) ಖಾಸಗಿ ವಲಯ

3. _______ ಎಂಬುದು ನೇರ ತೆರಿಗೆಯಾಗಿದೆ.
   ಅ) ಆದಾಯ ತೆರಿಗೆ
   ಆ) ಕಸ್ಟಮ್ಸ್ ಸುಂಕ
   ಇ) ಮಾರಾಟ ತೆರಿಗೆ
   ಈ) ಅಬಕಾರಿ ತೆರಿಗೆ

4. ಕೇಂದ್ರ ಬ್ಯಾಂಕು ಸರ್ಕಾರಿ ಭದ್ರತೆಗಳನ್ನು ಮತ್ತು ವಿನಿಮಯ ಹುಂಡಿಗಳನ್ನು ಮಾರುವ ಮತ್ತು ಕೊಳ್ಳುವುದಕ್ಕೆ_______ ಎನ್ನುತ್ತಾರೆ.
   ಅ) ಬ್ಯಾಂಕು ದರ
   ಆ) ಮುಕ್ತ ಮಾರುಕಟ್ಟೆ ಕಾರ್ಯಾಚರಣೆ
   ಇ) ಸಿ. ಆರ್. ಅರ್.
   ಈ) ಎಸ್. ಎಲ್. ಆರ್.

5. ಉದ್ಯೋಗ ಮತ್ತು ಉತ್ಪನ್ನದ ಮಟ್ಟದ ಹೆಚ್ಚಳಕ್ಕೆ ಕೊರತೆಯ ಹಣಕಾಸು ಕೋಶೀಯ ನೀತಿಯ ಅಸ್ತ್ರವಾಗಿದೆ ಎಂದು ಹೇಳಿದವರು _______
   ಅ) ಜೆ. ಎಂ. ಕೇನ್ಸ್
   ಆ) ಮಿಲ್ಟನ್ ಫ್ರಿಡ್‌ಮನ್

ಇ) ಆಡಂಸ್ಮಿತ್
ಈ) ಮೇಲಿನ ಯಾವುವೂ ಅಲ್ಲ

**II. ಈ ಕೆಳಗಿನ ವಾಕ್ಯಗಳಲ್ಲಿ ಖಾಲಿ ಬಿಟ್ಟ ಸ್ಥಳಗಳನ್ನು ತುಂಬಿರಿ.**

1. ಕೋಶೀಯ ನೀತಿಯ ಮಹತ್ವವು _______ ನಂತರ ಹೊರಹೊಮ್ಮಿತ್ತು.
2. ದೇಶದ ಹಣಕಾಸು ಪ್ರಾಧಿಕಾರವಾಗಿ ಕಾರ್ಯನಿರ್ವಹಿಸುವುದು _______.
3. ಪರೋಕ್ಷ ತೆರಿಗೆಯನ್ನು ಒಬ್ಬ ವ್ಯಕ್ತಿಯ ಮೇಲೆ ವಿಧಿಸಿದ್ದರೆ, ವಾಸ್ತವವಾಗಿ ಪಾವತಿಯನ್ನು _______ ಮಾಡುವರು.
4. ಸಾರ್ವಜನಿಕ ವೆಚ್ಚವು ಪ್ರಮುಖವಾಗಿ _______ ಮತ್ತು _______ ವೆಚ್ಚಗಳನ್ನು ಒಳಗೊಂಡಿದೆ.
5. ತೆರಿಗೆಯೇತರ ಮೂಲಗಳಿಂದ ಸಂಗ್ರಹಿಸುವ ಆದಾಯವನ್ನು _______ ಎಂದು ಕರೆಯಲಾಗುತ್ತದೆ.

**III. ಈ ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

1. ನಮ್ಮ ದೇಶದಲ್ಲಿ ಹಣದ ಪೂರೈಕೆಯನ್ನು ನಿಯಂತ್ರಿಸುವ ಬ್ಯಾಂಕನ್ನು ಹೆಸರಿಸಿ.
2. ಕೋಶೀಯ ನೀತಿಯನ್ನು ವ್ಯಾಖ್ಯಾನಿಸಿ.
3. ಬ್ಯಾಂಕು ದರ ಎಂದರೇನು?
4. ಪರೋಕ್ಷ ತೆರಿಗೆಗೆ ಎರಡು ಉದಾಹರಣೆ ನೀಡಿ.
5. ನಗದು ಮೀಸಲು ಅನುಪಾತ ಎಂದರೇನು?

**IV. ಈ ಕೆಳಗಿನ ಪ್ರಶ್ನೆಗಳಿಗೆ ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿ**

1. ಕೋಶೀಯ ನೀತಿಯ ನಾಲ್ಕು ಉದ್ದೇಶಗಳನ್ನು ತಿಳಿಸಿ.
2. ಕೋಶೀಯ ನೀತಿಯ ಸಾಧನಗಳನ್ನು ಹೆಸರಿಸಿ.
3. ನೇರ ತೆರಿಗೆ ಮತ್ತು ಪರೋಕ್ಷ ತೆರಿಗೆಯ ನಡುವಿನ ವ್ಯತ್ಯಾಸ ಬರೆಯಿರಿ.
4. ಸಾರ್ವಜನಿಕ ವೆಚ್ಚದ ಎರಡು ಪ್ರಕಾರಗಳನ್ನು ತಿಳಿಸಿ.
5. ಹಣಕಾಸು ನೀತಿಯನ್ನು ವ್ಯಾಖ್ಯಾನಿಸಿ.

**V. ಈ ಕೆಳಗಿನ ಪ್ರಶ್ನೆಗಳಿಗೆ ಎಂಟು ವಾಕ್ಯಗಳಲ್ಲಿ ಉತ್ತರಿಸಿ.**

1. ಕೋಶೀಯ ನೀತಿಯ ಸಾಧನಗಳನ್ನು ವಿವರಿಸಿ.

2. ಹಣಕಾಸು ನೀತಿಯ ಉದ್ದೇಶ ಮತ್ತು ಸಾಧನಗಳನ್ನು ಚರ್ಚಿಸಿ.

3. ಕೋಶೀಯ ನೀತಿಯ ಉದ್ದೇಶಗಳನ್ನು ವಿವರಿಸಿ.
4. ಸಾರ್ವಜನಿಕ ಸಾಲದ ವಿಧಗಳನ್ನು ವಿವರಿಸಿ.

5. ಅಭಿವೃದ್ಧಿ ಮತ್ತು ಅಭಿವೃದ್ಧಿಯೇತರ ವೆಚ್ಚದ ನಡುವಿನ ವ್ಯತ್ಯಾಸಗಳನ್ನು ಬರೆಯಿರಿ.

**ನಿಯೋಜಿತ ಕಾರ್ಯ:**

ಹಿಂದಿನ ಮೂರು ವರ್ಷಗಳಿಂದ ಹಣದುಬ್ಬರವನ್ನು ನಿಯಂತ್ರಿಸಲು ಆರ್. ಬಿ ಐ. ಕೈಗೊಂಡ ಹಣಕಾಸು ನೀತಿಯನ್ನು ಪಟ್ಟಿಮಾಡಿರಿ.

ಸರ್ಕಾರವು ನಿಮ್ಮ ಜಿಲ್ಲೆಯಲ್ಲಿ ಕೈಗೊಂಡಿರುವ ಕೆಲಸಗಳನ್ನು ಮತ್ತು ಅದರ ಪರಿಣಾಮಗಳನ್ನು ಪಟ್ಟಿಮಾಡಿರಿ.

## ಅಧ್ಯಾಯ- 10: ಯೋಗಕ್ಷೇಮದ ಅರ್ಥಶಾಸ್ತ್ರ

"ಒಂದು ಸಮಾಜವು ಪೆರೆಟೋ ಸೂಕ್ತ ಆಯ್ಕೆಯಾಗಿದ್ದರೂ ಸಹ ಅದು ನಿಖರವಾಗಿ ಅಸಹ್ಯಕರವಾಗಿರಲುಬಹುದು." **ಅಮೃರ್ತ್ಯಸೇನ್**

### ಪೀಠಿಕೆ:

ಸಮಾಜದ ಬೆಳವಣಿಗೆಯು ವಿವಿಧ ಅಂಶಗಳನ್ನು ಅವಲಂಬಿಸಿರುತ್ತದೆ. ಸಮಾಜದ ಯೋಗಕ್ಷೇಮದ ಕಡೆಗೆ ಸಂಪತ್ತು ಮಾತ್ರವಲ್ಲದೇ, ಸಾಕ್ಷರತೆ, ಗುಣಮಟ್ಟದ ಶಿಕ್ಷಣ, ಶಿಕ್ಷಕರ ಸಂಖ್ಯೆ, ಆರೋಗ್ಯ, ವೈದ್ಯರ ಸಂಖ್ಯೆ, ಸಾರ್ವಜನಿಕ ಆರೋಗ್ಯ ಸೇವೆಗಳು, ಮಾಲಿನ್ಯದ ಮಟ್ಟ ಅಲ್ಲದೇ ಇತರೆ ಅಂಶಗಳು ಸಹ ಕೊಡುಗೆ ನೀಡುತ್ತವೆ. ಇದು ಜನರ ಸಮೃದ್ಧಿಯ ಬದಲಿಗೆ ಜನರ ಒಟ್ಟಾರೆ ಸಂತೋಷವನ್ನು ಸೂಚಿಸುತ್ತದೆ. ಅಂದರೆ ಜನ ಎಷ್ಟು ಶ್ರೀಮಂತರು ಎಂಬುದಕ್ಕಿಂತ ಅವರು ಹೇಗೆ ಸಂತೋಷದಿಂದ ಇದ್ದಾರೆ ಎಂಬುದು ಪ್ರಮುಖವಾಗಿದೆ. ಅರ್ಥಶಾಸ್ತ್ರದಲ್ಲಿ ಸಂತೋಷವನ್ನು ಯೋಗಕ್ಷೇಮವೆಂದು ವಿವರಿಸಲಾಗಿದೆ. ಆದ್ದರಿಂದ ಯೋಗಕ್ಷೇಮ ಎಂದರೇನು? ಯೋಗಕ್ಷೇಮದ ವಿವಿಧ ಪ್ರಕಾರಗಳಾವುವು? ಅವು ವೈಯಕ್ತಿಕ ಮತ್ತು ಸಮಾಜದ ಬೆಳವಣಿಗೆ ಕಡೆಗೆ ಹೇಗೆ ಕೊಡುಗೆ ನೀಡುತ್ತವೆ? ಈ ಎಲ್ಲಾ ಪ್ರಶ್ನೆಗಳಿಗೆ ಉತ್ತರಗಳನ್ನು ಮತ್ತು ಜನರ ಯೋಗಕ್ಷೇಮದ ಸುಧಾರಣೆಗೆ ಸಂಬಂಧಿಸಿದ ವಿಷಯಗಳನ್ನು ಅರ್ಥಮಾಡಿಕೊಳ್ಳುವ ಉದ್ದೇಶವನ್ನು ಈ ಅಧ್ಯಾಯವು ಒಳಗೊಂಡಿದೆ.

## ಯೋಗಕ್ಷೇಮದ ಅರ್ಥ:

ಮಾರ್ಷಲ್‌ರವರ ಪ್ರಕಾರ "ಅರ್ಥಶಾಸ್ತ್ರವು ಮಾನವಕುಲದ ಸಾಮಾನ್ಯಜೀವನ ವ್ಯವಹಾರವನ್ನು ಅಧ್ಯಯನ ಮಾಡುವುದಾಗಿದೆ. ಇದು ಒಬ್ಬ ಮನುಷ್ಯ ಆದಾಯ ಹೇಗೆ ಗಳಿಸುತ್ತಾನೆ ಮತ್ತು ಹೇಗೆ ಅದನ್ನು ಬಳಸುತ್ತಾನೆ ಎಂಬುದನ್ನು ವಿಶ್ಲೇಷಿಸುತ್ತದೆ. ಆದ್ದರಿಂದ ಇದು ಒಂದು ಕಡೆ ಸಂಪತ್ತಿನ ಅಧ್ಯಯನವಾದರೆ ಮತ್ತೊಂದು ಕಡೆ ಮಾನವಕುಲದ ಅಧ್ಯಯನವು ಅತ್ಯಂತ ಪ್ರಮುಖ ಭಾಗವಾಗಿದೆ".

ಯೋಗಕ್ಷೇಮ ಅಥವಾ ಕಲ್ಯಾಣ ಎಂಬುದು ಸಂತೋಷವಾಗಿರುವುದು, ಆರೋಗ್ಯಕರವಾಗಿರುವುದು ಅಥವಾ ಯಶಸ್ವಿಯಾಗಿರುವ ಸ್ಥಿತಿಯಾಗಿದೆ. ಮಾನವನ ಯೋಗಕ್ಷೇಮವು ವ್ಯಕ್ತಿಗಳು ಮತ್ತು ಅವರ ಸುತ್ತಮುತ್ತಲಿನ ಸಮಾಜದ ಕ್ಷೇಮದ ಸುಧಾರಣೆಯ ಗುರಿ ಹೊಂದಿದೆ. ಈ ಪ್ರಕ್ರಿಯೆಯಲ್ಲಿ ಉತ್ತಮ ಮತ್ತು ಸಂತೋಷ ಜೀವನಕ್ಕಾಗಿ ಸಂಪನ್ಮೂಲಗಳನ್ನು ಒದಗಿಸಿ ಅಗತ್ಯ ಪರಿಸ್ಥಿತಿಗಳನ್ನು ನಿರ್ಮಾಣ ಮಾಡುವ ಪ್ರಯತ್ನ ನಡೆಸಲಾಗುತ್ತದೆ. ಇದು ಜನರ ನಡುವೆ ಕಾಳಜಿ ಮತ್ತು ಸಹಕಾರದ ವಾತಾವರಣವನ್ನು ನಿರ್ಮಿಸಲು ಪ್ರಯತ್ನಿಸುತ್ತದೆ. ಆದಾಗ್ಯೂ ಮಾನವನ ಯೋಗಕ್ಷೇಮವನ್ನು ಪರಿಮಾಣಾತ್ಮಕವಾಗಿ ನಿಖರವಾಗಿ ಅಳೆಯುವುದು ಕಷ್ಟಕರ. ಆದ್ದರಿಂದ ಅರ್ಥಶಾಸ್ತ್ರಜ್ಞರು ಸಮುದಾಯದ ಬಳಕೆಗೆ ನೀಡುವ ಸರಕು ಮತ್ತು ಸೇವೆಗಳ ಅನುಭೋಗದಿಂದ ಪಡೆಯಲಾಗುವ ತೃಪ್ತಿಯ ಪ್ರಮಾಣವನ್ನು ಮಾನವನ ಯೋಗಕ್ಷೇಮವೆಂದು ಮಾಪನ ಮಾಡುತ್ತಾರೆ. ಹಾಗಾಗಿ ಪರೋಕ್ಷವಾಗಿ, ಜನರ ಅನುಭೋಗಕ್ಕೆ ಲಭ್ಯವಿರುವ ಸರಕು ಮತ್ತು ಸೇವೆಗಳ ಮೊತ್ತವನ್ನು ಮಾನವನ ಯೋಗಕ್ಷೇಮದ ಸೂಚಕವಾಗಿದೆ. ಈ ಪ್ರಕಾರದ ಸರಕುಗಳು ಮತ್ತು ಸೇವೆಗಳು ಆರ್ಥಿಕ ಮತ್ತು ಆರ್ಥಿಕವಲ್ಲದ ಸರಕುಗಳ ವಿಧಗಳೆರಡನ್ನು ಒಳಗೊಂಡಿದೆ.

ಯೋಗಕ್ಷೇಮದ ಅರ್ಥಶಾಸ್ತ್ರವು, ಅರ್ಥಶಾಸ್ತ್ರದ ಒಂದು ಪ್ರಮುಖ ಶಾಖೆಯಾಗಿದ್ದು, ಪ್ರಮುಖವಾಗಿ ಸಮುದಾಯದ ಯೋಗಕ್ಷೇಮದ ಉತ್ತೇಜನಕ್ಕೆ ಸಂಬಂಧಿಸಿದ್ದಾಗಿದೆ.ಯೋಗಕ್ಷೇಮದ ಅರ್ಥಶಾಸ್ತ್ರವು ಇಡೀ ಸಮಾಜದ ಆರ್ಥಿಕ ಯೋಗಕ್ಷೇಮದ ದೃಷ್ಟಿಕೋನದಿಂದ ಪರ್ಯಾಯ ವಿಧಾನಗಳಲ್ಲಿ ಸಂಪನ್ಮೂಲಗಳ ಹಂಚಿಕೆಯ ಮೌಲ್ಯಮಾಪನ ಮಾಡಲು ಪ್ರಯತ್ನಿಸುತ್ತದೆ. ಉದಾಹರಣೆಗೆ, ಒಂದು ಸಮಾಜದ ಪ್ರಸ್ತುತ ಒಟ್ಟು ಯೋಗಕ್ಷೇಮವು ಆಗಿದ್ದರೆ, ಯೋಗಕ್ಷೇಮದ ಅರ್ಥಶಾಸ್ತ್ರವು ಅದಕ್ಕಿಂತ ಹೆಚ್ಚಿನ ಮಟ್ಟದ ಕ್ಷೇಮಾಭಿವೃದ್ಧಿಯನ್ನು ಪಡೆಯಲು ಪ್ರಯತ್ನಿಸುತ್ತದೆ. ಅಂದರೆ ಭವಿಷ್ಯದಲ್ಲಿ ಸಮಾಜದ ಒಟ್ಟು ಯೋಗಕ್ಷೇಮವನ್ನು ಮಟ್ಟಕ್ಕೆ ಏರಿಸಲು ಸಂಪನ್ಮೂಲಗಳ ಮರು ಹಂಚಿಕೆಯ ವಿವಿಧ ವಿಧಾನಗಳನ್ನು ಸೂಚಿಸುತ್ತದೆ. ಇಲ್ಲಿಯೋ ಆಗಿರುತ್ತದೆ.

ಆದ್ದರಿಂದ ಯೋಗಕ್ಷೇಮ ಅರ್ಥಶಾಸ್ತ್ರದ ಮೂಲಭೂತ ಉದ್ದೇಶವು ಗರಿಷ್ಠ ಸಾಮಾಜಿಕ ಕ್ಷೇಮಾಭಿವೃದ್ಧಿ ಒದಗಿಸಲು ಬೇಕಾಗುವ ಅಂಶಗಳು ಹಾಗೂ ಅದನ್ನು

ಸಾಧಿಸಬಹುದಾದ ಎಂಬ ಅಂಶಗಳನ್ನು ವಿವರಿಸುವುದಾಗಿದೆ. ಇದು ಪರ್ಯಾಯ ಆರ್ಥಿಕ ಸ್ಥಿತಿಗಳ ಸ್ಥಾನವನ್ನು ಉತ್ತಮ ಇಲ್ಲವೆ ಕೆಟ್ಟದು ಎಂದು ತೋರಲು ಸಹಾಯಕವಾಗಿದೆ. ಸಂಪನ್ಮೂಲ ಹಂಚಿಕೆಯನ್ನು ಹೊರತುಪಡಿಸಿ, ಯೋಗಕ್ಷೇಮ ಅರ್ಥಶಾಸ್ತ್ರವು ಸರಕುಗಳಲ್ಲಿನ ಉತ್ಪಾದನಾಂಗಗಳ ಆದರ್ಶ ಹಂಚಿಕೆಗೆ ಮತ್ತು ಅನುಭೋಗಿಗಳ ನಡುವೆ ಸರಕುಗಳ ವಿತರಣೆಗೆ ಸೂಕ್ತವಾದ ನೀತಿಯನ್ನು ತರಲು ಸಹ ಸಹಾಯಕವಾಗಿದೆ. ಉದಾಹರಣೆಗೆ ಸಮಾಜದಲ್ಲಿ ಅಗತ್ಯವಿರುವ ಬಡಜನರಿಗಾಗಿ ಸರ್ಕಾರವು ಸಾಮಾನ್ಯವಾಗಿ ಉಚಿತ ಅಥವಾ ಸಹಾಯಧನದ ದರದಲ್ಲಿ ಸರಕುಗಳು ಮತ್ತು ಸೇವೆಗಳನ್ನು ಪೂರೈಸುವ ಮೂಲಕ ನೆರವಾಗುತ್ತದೆ.

## ಯೋಗಕ್ಷೇಮಕ್ಕೆ ಸಂಬಂಧಿಸಿದ ಪರಿಕಲ್ಪನೆಗಳು:

ಯೋಗಕ್ಷೇಮವು ವಸ್ತುನಿಷ್ಠ ಸ್ವರೂಪದ್ದಾಗಿದೆ ಮತ್ತು ಯೋಗಕ್ಷೇಮವನ್ನು ವಿವಿಧ ಅಂಶಗಳಿಂದ ಪಡೆಯಬಹುದಾಗಿದೆ. ಹೀಗಾಗಿ, ಯೋಗಕ್ಷೇಮದ ಸೂಕ್ತವಾದ ಅರ್ಥವನ್ನು ಅರ್ಥಮಾಡಿಕೊಳ್ಳುವುದು ಕಷ್ಟ. ಹಾಗಾಗಿ ಯೋಗಕ್ಷೇಮಕ್ಕೆ ಸಂಬಂಧಿಸಿದ ಪರಿಕಲ್ಪನೆಗಳ ಅಧ್ಯಯನವು ಅದನ್ನು ಉತ್ತಮ ರೀತಿಯಲ್ಲಿ ಅರ್ಥೈಸಿಕೊಳ್ಳಲು ಸಹಾಯ ಮಾಡುತ್ತದೆ.

1. ಆರ್ಥಿಕ ಮತ್ತು ಆರ್ಥಿಕೇತರ ಯೋಗಕ್ಷೇಮ:

**ಆರ್ಥಿಕ ಯೋಗಕ್ಷೇಮ:**

ಹಣದರೂಪದಲ್ಲಿ ನೇರವಾಗಿ ಅಥವಾ ಪರೋಕ್ಷವಾಗಿ ಮಾಪನ ಮಾಡಬಹುದಾದ ಯೋಗಕ್ಷೇಮವಾಗಿದೆ. ಅಂದರೆ ವ್ಯಕ್ತಿಗಳ ಮತ್ತು ಸಮುದಾಯದ ಸಮೃದ್ಧಿಯ ಮಟ್ಟ ಮತ್ತು ಗುಣಮಟ್ಟದ ಜೀವನದ ಮೇಲೆ ಆಧಾರಿತವಾಗಿರುವುದನ್ನು ಆರ್ಥಿಕ ಯೋಗಕ್ಷೇಮ ಎನ್ನಲಾಗುತ್ತದೆ. ಇದು ರಾಷ್ಟ್ರೀಯ ಆದಾಯ, ತಲಾದಾಯ, ಅನುಭೋಗ, ಹೂಡಿಕೆ ಇತ್ಯಾದಿ ಅಂಶಗಳನ್ನು ಪ್ರಭಾವಿಸುತ್ತದೆ. ಇದು ಆರ್ಥಿಕ ಸರಕು ಮತ್ತು ಸೇವೆಗಳು, ಸಂಪತ್ತು ಹೊಂದಿರುವಿಕೆ, ಸರಕುಗಳು ಮತ್ತು ಸೇವೆಗಳ ವಿತರಣೆ ಇತ್ಯಾದಿಗಳಿಂದ ಗಳಿಸಿದ ತುಷ್ಟಿಗುಣವನ್ನು ಸಹ ವ್ಯಕ್ತಪಡಿಸುತ್ತದೆ.

**ಆರ್ಥಿಕೇತರ ಯೋಗಕ್ಷೇಮ:**

ಇಂತಹ ಯೋಗಕ್ಷೇಮವನ್ನು ಹಣದ ರೂಪದಲ್ಲಿ ಮಾಪನ ಮಾಡಲು ಆಗುವುಲ್ಲ. ಉದಾಹರಣೆಗೆ ನೈತಿಕ ಯೋಗಕ್ಷೇಮ, ಸಾಮಾಜಿಕ, ಸಾಂಸ್ಕøತಿಕ ಮತ್ತು ರಾಜಕೀಯ ಅಂಶಗಳನ್ನು ಆರ್ಥಿಕೇತರ ಅಂಶಗಳನ್ನು ಒಳಗೊಂಡಿರುತ್ತದೆ. ಉದಾಹರಣೆಗೆ, ಪರಿಸರ ಜಾಗೃತಿ ಕಾರ್ಯಕ್ರಮಗಳಲ್ಲಿ ಭಾಗವಹಿಸುವಿಕೆ, ಸಮಾಜದಲ್ಲಿನ ಸಾಮಾಜಿಕ ಚಟುವಟಿಕೆಗಳು, ರಾಜಕೀಯ ಚಟುವಟಿಕೆಗಳಲ್ಲಿ ಒಳಗೊಳ್ಳುವಿಕೆ, ಕಾನೂನು

ಸುವ್ಯವಸ್ಥೆಯ ನಿರ್ವಹಣೆಯಲ್ಲಿ ಸಹಕಾರ ಇತ್ಯಾದಿಗಳು ಆರ್ಥಿಕೇತರ ಯೋಗಕ್ಷೇಮಕ್ಕೆ ಉದಾಹರಣೆಗಳಾಗಿವೆ.

2. ವೈಯಕ್ತಿಕ ಯೋಗಕ್ಷೇಮ ಮತ್ತು ಸಾಮಾಜಿಕ ಯೋಗಕ್ಷೇಮ:

**ವೈಯಕ್ತಿಕ ಯೋಗಕ್ಷೇಮ:**

ಇದನ್ನು ಒಬ್ಬ ವ್ಯಕ್ತಿಯು ಅನುಭೋಗಿಸಿದ ಸರಕು ಮತ್ತು ಸೇವೆಗಳಿಂದ ದೊರೆಯುವ ಒಟ್ಟು ತೃಪ್ತಿಯ ಮೊತ್ತವೆಂದು ವ್ಯಾಖ್ಯಾನಿಸಲಾಗಿದೆ. ಇದು ಒಬ್ಬ ವ್ಯಕ್ತಿಯು ಹೊಂದಿರುವ ಆಸ್ತಿಗಳ ಮತ್ತು ಸರಕು ಹಾಗೂ ಸೇವೆಗಳ ಬಳಕೆ ಮಾಡುವುದರ ಮೂಲಕ ಪಡೆಯಲಾದ ತೃಪ್ತಿ ಅಥವಾ ತುಷ್ಟಿಗುಣವನ್ನು ಒಳಗೊಂಡಿದೆ. ವ್ಯಕ್ತಿಗಳಿಗೆ ದೊರೆಯುವ ಯೋಗಕ್ಷೇಮದ ಮೊತ್ತವು 1) ವ್ಯಕ್ತಿಯು ಸಾಧಿಸಲು ಬಯಸಿರುವ ಚಲಕಗಳ ಗುರಿಯ ಗುಂಪು 2) ಚಲಕದ ತುಷ್ಟಿಗುಣವನ್ನು ಪ್ರಭಾವಿಸುವ ಉದ್ದೇಶ 3) ವ್ಯಕ್ತಿಯು ತನ್ನ ಗುರಿ ಸಾಧಿಸಲು ಅನುಸರಿಸುವ ನಿರ್ಧಾರದ ನಿಯಮಗಳ ಮೇಲೆ ಅವಲಂಬಿತವಾಗಿದೆ. ಉದಾಹರಣೆಗೆ ಒಂದು ವೇಳೆ ಒಬ್ಬ ವ್ಯಕ್ತಿಯು ‘ಈ’ ಸರಕಿಗಿಂತ ‘ಅ’ ಸರಕಿನ ಅನುಭೋಗಕ್ಕೆ ಹೆಚ್ಚಿನ ಆದ್ಯತೆ ನೀಡುತ್ತಾನೆ ಎಂದು ಊಹಿಸಿಕೊಳ್ಳಿ, ಇದು ವ್ಯಕ್ತಿಗೆ ‘ಈ’ ಸರಕಿಗಿಂತ ಹೆಚ್ಚಿನ ಯೋಗಕ್ಷೇಮವನ್ನು ‘ಅ’ ಸರಕು ಒದಗಿಸುತ್ತದೆ ಎಂಬುದನ್ನು ಸೂಚಿಸುತ್ತದೆ. ‘ಈ’ ಸರಕು ಮತ್ತು ‘ಅ’ ಸರಕುಗಳ ನಡುವಿನ ಹೋಲಿಕೆಯು ಅನುಭೋಗಿಯ ಆಯ್ಕೆಯ ಉದ್ದೇಶ ಮತ್ತು ನಿರ್ಧಾರದ ನಿಯಮಗಳನ್ನು ಪ್ರಭಾವಿಸುತ್ತದೆ ಎಂದು ತೋರಿಸುತ್ತದೆ.

### ಸಾಮಾಜಿಕ ಯೋಗಕ್ಷೇಮ:

ಇದು ಸಮಾಜದಲ್ಲಿನ ಎಲ್ಲಾ ಸದಸ್ಯರ ವೈಯಕ್ತಿಕ ಯೋಗಕ್ಷೇಮದ ಸಮಗ್ರತೆಯಾಗಿದೆ. ಒಂದು ಸಮಾಜದಲ್ಲಿ X, Y, ಮತ್ತು Z ಎಂಬ ಮೂವರು ವ್ಯಕ್ತಿಗಳಿದ್ದಾರೆ ಎಂದು ಭಾವಿಸೋಣ, ಹಾಗಾದರೆ ಸಾಮಾಜಿಕ ಯೋಗಕ್ಷೇಮವು (W) ಆ ಮೂವರು ವ್ಯಕ್ತಿಗಳ ಒಟ್ಟು ತುಷ್ಟಿಗುಣದ ಮೊತ್ತವಾಗಿರುತ್ತದೆ. ಇದನ್ನು

$W = UX + UY + UZ$ ಎಂದು ಹೇಳಬಹುದು.

ಇಲ್ಲಿ, U = ಎಂಬುದು X, Y, ಮತ್ತು Z ವ್ಯಕ್ತಿಗಳಿಗೆ ಸಂಬಂಧಿಸಿದ ತುಷ್ಟಿಗುಣವನ್ನು ಸೂಚಿಸುತ್ತದೆ.

ಸಾಮಾಜಿಕ ಯೋಗಕ್ಷೇಮವು ಸಮಾಜದ ಎಲ್ಲಾ ಸದಸ್ಯರಿಗೆ ಗುಣಮಟ್ಟದ

i. ಶಿಕ್ಷಣ
ii. ವೈದ್ಯಕೀಯ ಮತ್ತು ಆರೋಗ್ಯ
iii. ವಸತಿ

iv. ಆದಾಯ ನಿರ್ವಹಣೆ
v. ವೈಯಕ್ತಿಕ ಯೋಗಕ್ಷೇಮ
vi. ಕೌಶಲ್ಯ ತರಬೇತಿ
vii. ಸಮುದಾಯ ಅಭಿವೃದ್ಧಿಯನ್ನು ಒದಗಿಸುವುದನ್ನು ಕೇಂದ್ರೀಕರಿಸುತ್ತದೆ.

ಹೀಗಾಗಿ, ಯೋಗಕ್ಷೇಮವು ವ್ಯಕ್ತಿಗಳು ತಮ್ಮ ಸಾಮರ್ಥ್ಯವನ್ನು ಬಲಪಡಿಸಿಕೊಳ್ಳಲು ಮತ್ತು ಸ್ವಾವಲಂಬಿಗಳಾಗಲು ಸಹಾಯಕವಾಗಿದೆ. ಸರ್ಕಾರ ಮತ್ತು ಸ್ವಯಂ ಸೇವಾ ಸಂಸ್ಥೆಗಳು ಸಾಮಾಜಿಕ ಯೋಗಕ್ಷೇಮ ಕಾರ್ಯಕ್ರಮಗಳಲ್ಲಿ ಒಂದು ಪ್ರಮುಖ ಪಾತ್ರವನ್ನು ನಿರ್ವಹಿಸುತ್ತದೆ. ವೈಯಕ್ತಿಕ ಮತ್ತು ಸಾಮಾಜಿಕ ಯೋಗಕ್ಷೇಮ ನಡುವಿನ ವ್ಯತ್ಯಾಸ ಸಮಾಜದ ಯೋಗಕ್ಷೇಮವನ್ನು ಹೆಚ್ಚಿಸುತ್ತದೆ. ಆದರೆ ಇದು ಎಲ್ಲಾ ಸಮಯದಲ್ಲೂ ಸಾಧ್ಯವಿಲ್ಲ. ಮೊದಲನೆಯದಾಗಿ, ಖಾಸಗಿ ಪ್ರಯೋಜನಗಳು ಸಾಮಾಜಿಕ ಪ್ರಯೋಜನೆಗಳಿಗಿಂತ ಕಡಿಮೆಯಿರುತ್ತದೆ ಎಂದು ಹಲವು ನಿದರ್ಶನಗಳಿವೆ. ಉದಾಹರಣೆಗೆ ಒಬ್ಬ ವ್ಯಕ್ತಿಯು ತಮ್ಮ ಖಾಸಗಿ ತೋಟದಲ್ಲಿ ಮರಗಳನ್ನು ಬೆಳಸುವುದರಿಂದ ನೆರೆಹೊರೆಯ ಗಾಳಿಮಟ್ಟವನ್ನು ಸುಧಾರಿಸುತ್ತದೆ ಅಥವಾ ಖಾಸಗಿ ಮನೆಯಲ್ಲಿ ಹಾಕಿರುವ ದೀಪ ಅಥವಾ ಹಡಗಿಗೆ ಸಹಾಯ ಮಾಡುವ ಲೈಟ್‌ಹೌಸ್‌ಗೆ ಯಾವುದೇ ಶುಲ್ಕ ಹೇರಲಾಗುವುದಿಲ್ಲ. ಇಂತಹ ಖಾಸಗಿ ಲಾಭಗಳು ಸಾಮಾಜಿಕ ಲಾಭಗಳಿಗಿಂತ ಕಡಿಮೆಯಾಗಿದೆ.

ಮತ್ತೊಂದು ಕಡೆ ಖಾಸಗಿ ಪ್ರಯೋಜನಗಳು ಸಾಮಾಜಿಕ ಪ್ರಯೋಜನಗಳಿಗಿಂತ ಹೆಚ್ಚಾಗಿರುತ್ತದೆ ಎಂಬ ನಿದರ್ಶನವಿರುತ್ತದೆ. ಉದಾಹರಣೆಗೆ ಒಂದು ಕಾರ್ಖಾನೆಯ ಚಿಮಣಿಯಿಂದ ಹೊರಬರುವ ಹೊಗೆಯ ಕಾರಣದಿಂದ ಸಮಾಜಕ್ಕೆ ಹಾನಿಕಾರಕವಾಗುತ್ತದೆ. ಆದರೆ ಮಾಲೀಕರು ಹೊಗೆಯಿಂದ ಆಗುತ್ತಿರುವ ಅನಾಹುತಗಳನ್ನು ನಿರ್ಲಕ್ಷಿಸಿ ಸರಕುಗಳನ್ನು ಉತ್ಪಾದಿಸಿ, ಮಾರಾಟ ಮಾಡುವ ಮೂಲಕ ಲಾಭ ಗಳಿಸುತ್ತಾರೆ. ಹಾಗೆಯೇ ರೈತರು ತಮ್ಮ ಜಮೀನುಗಳಲ್ಲಿ ತಮ್ಮ ಬೆಳೆಗಳಿಗೆ ಕೀಟಗಳಿಂದ ಹಾನಿಯನ್ನು ತಪ್ಪಿಸಲು ಕೀಟ ನಿಯಂತ್ರಣ ಚಿಕಿತ್ಸೆಯನ್ನು ಅನುಸರಿಸುತ್ತಾರೆ. ಆದರೆ ಇದು ಬೆಳೆಗಳಲ್ಲಿ ರಾಸಾಯನಿಕ ಅಂಶಗಳನ್ನು ಹೆಚ್ಚಿಸುತ್ತದೆ. ಹೀಗೆ ವೈಯಕ್ತಿಕ ಮತ್ತು ಸಾಮಾಜಿಕ ಯೋಗಕ್ಷೇಮದ ನಡುವೆ ಅನೇಕ ವ್ಯತ್ಯಾಸಗಳಿವೆ.

## ಯೋಗಕ್ಷೇಮದ ಮಾನದಂಡ:

ಯೋಗಕ್ಷೇಮವನ್ನು ನಿರ್ಣಯಿಸುವಲ್ಲಿ ವಿವಿಧ ಮಾನದಂಡಗಳು ನಮಗೆ ಸಹಾಯಕವಾಗಿವೆ. ಇವುಗಳಲ್ಲಿ ಕೆಲವು ಪ್ರಮುಖವಾದವುಗಳನ್ನು ಈ ಕೆಳಗಿನಂತೆ ಚರ್ಚಿಸಲಾಗಿದೆ.

### ಪಿಗೂರವರ ಮಾನದಂಡ

ಆಲ್ಫ್ರೆಡ್. ಸಿ ಪಿಗುರವರ ಪ್ರಕಾರ ಆರ್ಥಿಕ ಯೋಗಕ್ಷೇಮವೆಂಬುದು ಸಾಮಾನ್ಯ ಯೋಗಕ್ಷೇಮದ ಭಾಗವಾಗಿದೆ. ಇದನ್ನು ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ಹಣದ ಸಾಧನದಿಂದ ಮಾಪನ ಮಾಡಲು ಸಾಧ್ಯವಿದೆ. ಇದು ಒಬ್ಬ ವ್ಯಕ್ತಿಯ ಆರ್ಥಿಕ ಸರಕು ಮತ್ತು ಸೇವೆಗಳ ಬಳಕೆಯಿಂದ ದೊರೆಯುವ ತುಷ್ಟಿಗುಣ ಅಥವಾ ತೃಪ್ತಿಯನ್ನು ಹಣಕ್ಕೆ ವಿನಿಮಯ ಮಾಡಿಕೊಳ್ಳಬಹುದು ಎಂದು ಸೂಚಿಸುತ್ತದೆ.

ಪಿಗೂರವರು ಆರ್ಥಿಕ ಯೋಗಕ್ಷೇಮವನ್ನು ರಾಷ್ಟ್ರೀಯ ಆದಾಯದ ರೂಪದಲ್ಲಿ ಮಾಪನ ಮಾಡುತ್ತಾರೆ. ಇವರು ಹೇಳುವಂತೆ ಇತರೆ ಸಂಗತಿಗಳು ತಟಸ್ಥವಾಗಿರುವಾಗ, ಒಂದು ರಾಷ್ಟ್ರೀಯ ಆದಾಯದಲ್ಲಿ ಹೆಚ್ಚಳವಾದರೆ, ಇದರಿಂದ ಸಮಾಜದಲ್ಲಿನ ಜನರ ಆರ್ಥಿಕ ಯೋಗಕ್ಷೇಮವು ಸುಧಾರಿಸಲ್ಪಡುತ್ತದೆ ಮತ್ತು ಪ್ರತಿಕ್ರಮವಾಗಿರುತ್ತದೆ. ಆದ್ದರಿಂದ ನೈಜರಾಷ್ಟ್ರೀಯ ಆದಾಯವನ್ನು ಹೆಚ್ಚಿಸಲು ಉತ್ಪಾದಕ ಸಂಪನ್ಮೂಲಗಳನ್ನು ಕಡಿಮೆ ಲಾಭದಾಯಕ ಉದ್ದಿಮೆಗಳಿಂದ ಹೆಚ್ಚು ಲಾಭದಾಯಕ ಉದ್ದಿಮೆಗಳಿಗೆ ಬದಲಾಯಿಸಬೇಕು.

## ಪೆರೆಟೋ ಮಾನದಂಡ:

ಪೆರೆಟೋರವರ ಪ್ರಕಾರ ಪ್ರಸ್ತುತ ಆರ್ಥಿಕ ಸಂಪನ್ಮೂಲಗಳ ಹಂಚಿಕೆಯನ್ನು ಪುರ್ನಸಂಘಟನೆ ಮಾಡಿದಾಗ, ಯಾವುದೇ ವ್ಯಕ್ತಿಗೆ ಹಾನಿಯಾಗದೆ, ಕನಿಷ್ಠ ಒಬ್ಬರ ಸ್ಥಿತಿಯಾದರೂ ಸಮಾಜದಲ್ಲಿ ಉತ್ತಮಗೊಂಡರೆ, ಅದು ಸಾಮಾಜಿಕ ಯೋಗಕ್ಷೇಮದಲ್ಲಿನ ಹೆಚ್ಚಳವನ್ನು ಸೂಚಿಸುತ್ತದೆ.

ಅಂದರೆ ಇತರರಿಗೆ ದಕ್ಕೆಯಾಗದಂತೆ ಕನಿಷ್ಠ ಒಬ್ಬ ವ್ಯಕ್ತಿಯ ಯೋಗಕ್ಷೇಮದ ಹೆಚ್ಚಳವನ್ನು ಸಂಪನ್ಮೂಲಗಳ ಪುರ್ನನಿರ್ದೇಶನದ ಸಹಾಯದಿಂದ ಸಾಮಾಜಿಕ ಯೋಗಕ್ಷೇಮವನ್ನು ಹೆಚ್ಚಿಸಬಹುದು.

ಈ ನಿಟ್ಟಿನಲ್ಲಿ ಪೆರೆಟೋರವರು ಗರಿಷ್ಠ ಸಾಮಾಜಿಕ ಯೋಗಕ್ಷೇಮ ಅಥವಾ ಆದರ್ಶ ಸಮಾಜ ನಿರ್ಮಿಸಲು ನಿರ್ದಿಷ್ಟ ನಿಯಮಗಳನ್ನು ಸೂಚಿಸಿದ್ದಾರೆ, ಅವುಗಳೆಂದರೆ;

1. ಅನುಭೋಗಿಗಳ ನಡುವೆ ಸರಕುಗಳ ವಿತರಣೆಯಲ್ಲಿ ದಕ್ಷತೆ (ಅನುಭೋಗದಲ್ಲಿನ ದಕ್ಷತೆ )
2. ಉದ್ದಿಮೆಗಳ ನಡುವೆ ಉತ್ಪಾದನಾಂಗಗಳ ಹಂಚಿಕೆಯಲ್ಲಿನ ದಕ್ಷತೆ (ಉತ್ಪಾದನಾಂಗಗಳ ದಕ್ಷತೆ)
3. ಉತ್ಪನ್ನದ ಸಂಯೋಜನೆಯಲ್ಲಿ ದಕ್ಷತೆ (ಉತ್ಪನ್ನ ಸಮ್ಮಿಶ್ರಣದಲ್ಲಿನ ದಕ್ಷತೆ)

## ಅಭ್ಯಾಸ

**I. ಈ ಕೆಳಗಿನ ಪ್ರಶ್ನೆಗಳಿಗೆ ನಾಲ್ಕು ಪರ್ಯಾಯ ಉತ್ತರಗಳನ್ನು ಕೊಡಲಾಗಿದೆ ಅವುಗಳಲ್ಲಿ ಸೂಕ್ತವಾದ ಉತ್ತರವನ್ನು ಆರಿಸಿ ಬರೆಯಿರಿ.**

1. ಯೋಗಕ್ಷೇಮದ ಅರ್ಥಶಾಸ್ತ್ರವು ಮಾನವನ _______ ಅಧ್ಯಯನವಾಗಿದೆ.
   ಅ) ಯೋಗಕ್ಷೇಮ
   ಆ) ಸಂಪತ್ತು
   ಇ) ಆದಾಯ
   ಈ) ಮೇಲಿನ ಯಾವುದೂ ಅಲ್ಲ

2. ಪರಿಸರಜಾಗೃತಿ ಕಾರ್ಯಕ್ರಮಗಳಲ್ಲಿ ಭಾಗವಹಿಸುವಿಕೆಯು _______ ಕ್ಕೆ ಉದಾಹರಣೆಯಾಗಿದೆ.
   ಅ) ಆರ್ಥಿಕ ಯೋಗಕ್ಷೇಮ
   ಆ) ಆರ್ಥಿಕವಲ್ಲದ ಯೋಗಕ್ಷೇಮ
   ಇ) ವಾಸ್ತವಿಕ ಅರ್ಥಶಾಸ್ತ್ರ
   ಈ) ಮೇಲಿನ ಯಾವುದೂ ಅಲ್ಲ

3. ವೈಯಕ್ತಿಕ ಯೋಗಕ್ಷೇಮವು ವ್ಯಕ್ತಿಯ _______ ಮೂಲಕ ಪಡೆದ ತೃಪ್ತಿಯಾಗಿರುತ್ತದೆ.
   ಅ) ಸರಕುಗಳು ಮತ್ತು ಸೇವೆಗಳ ಬಳಕೆ
   ಆ) ಸ್ವತ್ತುಗಳನ್ನು ಹೊಂದಿರುವಿಕೆ
   ಇ) ಅ ಮತ್ತು ಆ ಎರಡೂ
   ಈ) ಮೇಲಿನ ಯಾವುದೂ ಅಲ್ಲ

4. ಪಿಗುರವರ ಯೋಗಕ್ಷೇಮವೆಂಬುದು _______ ಸೂಚಿಸುತ್ತದೆ.
   ಅ) ಆರ್ಥಿಕ ಯೋಗಕ್ಷೇಮ
   ಆ) ಆರ್ಥಿಕವಲ್ಲದ ಯೋಗಕ್ಷೇಮ
   ಇ) ಅ ಮತ್ತು ಆ ಎರಡೂ
   ಈ) ಮೇಲಿನ ಯಾವುದೂ ಅಲ್ಲ

5. ಸಾಮಾಜಿಕ ಯೋಗಕ್ಷೇಮವು ಗುಣಮಟ್ಟದ _______ ಒದಗಿಸುವುದರಲ್ಲಿ ಕೇಂದ್ರಿಕರಿಸುತ್ತದೆ.
   ಅ) ಶಿಕ್ಷಣ
   ಆ) ವೈದ್ಯಕೀಯ ಮತ್ತು ಆರೋಗ್ಯ
   ಇ) ವಸತಿ

ಈ) ಮೇಲಿನ ಎಲ್ಲವೂ

**II. ಈ ಕೆಳಗಿನ ವಾಕ್ಯಗಳಲ್ಲಿ ಖಾಲಿ ಬಿಟ್ಟ ಸ್ಥಳಗಳನ್ನು ತುಂಬಿರಿ.**

1. ಮಾನವನ ಸಂತೋಷ ಮತ್ತು ತೃಪ್ತಿಯನ್ನು ಪ್ರತಿಬಿಂಬಿಸುವ ಮನಸ್ಥಿತಿಯನ್ನು _______ ಎಂದು ಕರೆಯಲಾಗುತ್ತದೆ.
2. ಆರ್ಥಿಕ ಯೋಗಕ್ಷೇಮವನ್ನು _______ ರೂಪದಲ್ಲಿ ಮಾಪನ ಮಾಡಲಾಗುತ್ತದೆ.
3. ಯೋಗಕ್ಷೇಮವನ್ನು ನೇರವಾಗಿ ಅಥವಾ ಪರೋಕ್ಷವಾಗಿ _______ ರೂಪದಲ್ಲಿ ಅಳೆಯಬಹುದು.
4. ಯೋಗಕ್ಷೇಮದ ಅರ್ಥಶಾಸ್ತ್ರವು ಪರ್ಯಾಯ ರೀತಿಯಲ್ಲಿ _______ ಮೌಲ್ಯಮಾಪನ ಮಾಡಲು ಪ್ರಯತ್ನಿಸುತ್ತದೆ.
5. ಸಾಮಾಜಿಕ ಯೋಗಕ್ಷೇಮದ ಅರ್ಥವು _______ ಯೋಗಕ್ಷೇಮದ ಸಮಗ್ರತೆಯಾಗಿದೆ.

**III. ಈ ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

1. ಯೋಗಕ್ಷೇಮದ ಅರ್ಥ ಬರೆಯಿರಿ.
2. ಆರ್ಥಿಕ ಯೋಗಕ್ಷೇಮವನ್ನು ಪ್ರಭಾವಿಸುವ ಯಾವುದಾದರೂ ಎರಡು ಅಂಶಗಳನ್ನು ತಿಳಿಸಿ.
3. ಆರ್ಥಿಕವಲ್ಲದ ಯೋಗಕ್ಷೇಮಕ್ಕೆ ಉದಾಹರಣೆ ಕೊಡಿ.
4. ವೈಯಕ್ತಿಕ ಯೋಗಕ್ಷೇಮ ಎಂದರೇನು?
5. ಸಾಮಾಜಿಕ ಯೋಗಕ್ಷೇಮ ಎಂದರೇನು?

**IV. ಈ ಕೆಳಗಿನ ಪ್ರಶ್ನೆಗಳಿಗೆ ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿ.**

1. ಮಾನವ ಯೋಗಕ್ಷೇಮದ ಅರ್ಥವೇನು?
2. ಆರ್ಥಿಕ ಯೋಗಕ್ಷೇಮವನ್ನು ನಾವು ಹೇಗೆ ಮಾಪನ ಮಾಡಬಹುದು?
3. ಯೋಗಕ್ಷೇಮ ಅರ್ಥಶಾಸ್ತ್ರದ ಉದ್ದೇಶಗಳು ಯಾವುವು?
4. ವೈಯಕ್ತಿಕ ಮತ್ತು ಸಾಮಾಜಿಕ ಯೋಗಕ್ಷೇಮದ ನಡುವಿನ ವ್ಯತ್ಯಾಸಗಳಿಗೆ ಕೆಲವು ಉದಾಹರಣೆಗಳನ್ನು ನೀಡಿ.

5. ವೈಯಕ್ತಿಕ ಯೋಗಕ್ಷೇಮದ ಅರ್ಥವನ್ನು ವಿವರಿಸಿ.

**V. ಈ ಕೆಳಗಿನ ಪ್ರಶ್ನೆಗಳಿಗೆ ಎಂಟು ವಾಕ್ಯಗಳಲ್ಲಿ ಉತ್ತರಿಸಿ.**

1. ಮಾನವನ ಜೀವನದಲ್ಲಿ ಯೋಗಕ್ಷೇಮದ ಪಾತ್ರವನ್ನು ವಿವರಿಸಿರಿ.
2. ಆರ್ಥಿಕ ಮತ್ತು ಆರ್ಥಿಕವಲ್ಲದ ಯೋಗಕ್ಷೇಮದ ಅರ್ಥವನ್ನು ವಿವರಿಸಿರಿ.
3. ಯೋಗಕ್ಷೇಮ ಅರ್ಥಶಾಸ್ತ್ರದ ಮೇಲೆ ಸಂಕ್ಷಿಪ್ತವಾಗಿ ಟಿಪ್ಪಣಿ ಬರೆಯಿರಿ.
4. ಸಾಮಾಜಿಕ ಯೋಗಕ್ಷೇಮದ ಮೇಲೆ ಒಂದು ಟಿಪ್ಪಣಿ ಬರೆಯಿರಿ.
5. ವೈಯಕ್ತಿಕ ಮತ್ತು ಸಾಮಾಜಿಕ ಯೋಗಕ್ಷೇಮದ ನಡುವಿನ ವ್ಯತ್ಯಾಸಗಳನ್ನು ಉದಾಹರಣೆಗಳ ಸಹಾಯದೊಂದಿಗೆ ಚರ್ಚಿಸಿ.

**ನಿಯೋಜಿತ ಕಾರ್ಯ:** ಆರ್ಥಿಕ ಮತ್ತು ಆರ್ಥಿಕೇತರ ಯೋಗಕ್ಷೇಮ ಚಟುವಟಿಕೆಗಳನ್ನು ಪಟ್ಟಿ ಮಾಡಿರಿ.

ನಿಮ್ಮ ಜಿಲ್ಲೆಯಲ್ಲಿನ ಸಾಮಾಜಿಕ ಯೋಗಕ್ಷೇಮ ಚಟುವಟಿಕೆಗಳ ಬಗ್ಗೆ ಮಾಹಿತಿಯನ್ನು ಸಂಗ್ರಹಿಸಿ ಬರೆಯಿರಿ.